ನವಸಾಕ್ಷರ ಪುಸ್ತಕ ಮಾಲೆ ೯೮

# ಬಾಹುಬಲಿ

ಚಂದ್ರ ಎನ್. ಸ್ವಾಮಿ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಹಾ. ಮಾ. ನಾಯಕ
ಎಚ್. ನರಸಿಂಹಯ್ಯ
ಜಿ. ನಾರಾಯಣ
ಎಲ್. ಎಸ್. ಶೇಷಗಿರಿರಾವ್
ಶಾಂತರಸ
ಕೆ. ವಿ. ಸುಬ್ಬಣ್ಣ
ಗೊ. ರು. ಚನ್ನಬಸಪ್ಪ
ಪಿ. ಎಸ್. ಶಂಕರ್
ಶಿವಶಂಕರ ಹಿರೇಮಠ
ಆರ್. ಎಸ್. ರಾಜಾರಾಮ್
ಶ್ರೀಮತಿ ಎಲ್. ಜಿ. ಸುಮಿತ್ರ

**ಸಂಪಾದಕ ಸಮಿತಿ**

*ಶ್ರೀಯುತರಾದ*
ಎಸ್. ಜಿ. ನಾಗಲೋಟಿಮಠ
ಕೆ. ವಿ. ನಾರಾಯಣ
ಪುರುಷೋತ್ತಮ ಬಿಳಿಮಲೆ
ಕರೀಗೌಡ ಬೀಚನಹಳ್ಳಿ
ಅಮೃತ ಸೋಮೇಶ್ವರ
ಸಿ. ಆರ್. ಚಂದ್ರಶೇಖರ್
ಬಿ. ಎ. ಶ್ರೀಧರ
ಲಿಂಗದೇವರು ಹಳೆಮನೆ
ಭ. ಮಲ್ಲಿಕಾರ್ಜುನ
ಮಹಾಬಲೇಶ್ವರರಾವ್
ಭಕ್ತಪ್ರಿಯ
ಎಂ. ಪಿ. ಪರಮಶೇಖರಯ್ಯ
ಶ್ರೀಮತಿ ಉಷಾ ರಾಂಕುಮಾರ್

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ - ೯೮

# ಬಾಹುಬಲಿ



ಚಂದ್ರಾ ಎಸ್. ಸ್ವಾಮಿ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೧೧



BAHUBALI : By Chandra N. Swamy. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. i i + 26, Rs. 8.00.

---



**ಸಂಯೋಜನಾಧಿಕಾರಿ**
ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಹಾಳಿ

**ಬೆಲೆ : ರೂ. ೮.೦೦**

ಮುದ್ರಕರು
ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈ.ಲಿ.
೧೨/೧೩, ಲಾಲ್‌ಬಾಗ್ ಫೋರ್ಟ್ ರಸ್ತೆ,
ಬೆಂಗಳೂರು – ೫೬೦ ೦೦೪.




# ಬಾಹುಬಲಿ

ಡಿಸೆಂಬರ್ ತಿಂಗಳು ಬಂದರೆ, ಎಲ್ಲ ಶಾಲೆಗಳಲ್ಲೂ ಪ್ರವಾಸದ ಸಂಭ್ರಮ. ಹವಾಮಾನ ಹಿತಕರವಾಗಿರುತ್ತದೆ. ಪರೀಕ್ಷೆಗಳ ಗಡಿಬಿಡಿ ಇರುವುದಿಲ್ಲ. ಹೀಗಾಗಿ, ನಮ್ಮ ಶಾಲೆಯಲ್ಲೂ ಪ್ರವಾಸದ ಸಭೆ ಸೇರಿತು. ಶ್ರವಣಬೆಳಗೊಳಕ್ಕೆ ಹೋಗಬೇಕೆಂದು ತೀರ್ಮಾನವಾಯಿತು. ಈ ವರ್ಷ ಅಲ್ಲಿ ಒಂದು ವಿಶೇಷವಿದೆ. ಅದು ಗೊಮ್ಮಟೇಶ್ವರನ ಮಹಾಮಸ್ತಕಾಭಿಷೇಕ. ಅದು ಈ ತಿಂಗಳ ಹತ್ತೊಂಬತ್ತಕ್ಕೆ ನಡೆಯಲಿದೆ. ಆದರೆ ಮಹಾಮಸ್ತಕಾಭಿಷೇಕಕ್ಕೆ ಸರಿಯಾಗಿ ಹೋದರೆ, ಅಲ್ಲಿನ ಜನಜಂಗುಳಿಯಲ್ಲಿ ಸರಿಯಾಗಿ ನೋಡಲು ಆಗದೇ ಇರಬಹುದು, ಅಂತ ತಿಳಿದು, ನಾವು ಮೊದಲೇ ಹೊರಟೆವು.

ಡಿಸೆಂಬರ್ ಒಂದನೆಯ ತಾರೀಖು. ಬಸ್ಸಿನಲ್ಲಿ ನನ್ನನ್ನು ಅಂಟಿಕೊಂಡು ನನ್ನ ಇಬ್ಬರು ಶಿಷ್ಯರು ಇದ್ದರು. ಅವರ ಹೆಸರು ಮಹಾದೇವ ಮತ್ತು ಮಾಧವ. ಅವರಿಬ್ಬರೂ ಬಹಳ ಜಾಣ ಹುಡುಗರು. ಎಲ್ಲವನ್ನೂ ಒಟ್ಟಿಗೆ ತಿಳಿಯುವ ಹಂಬಲ ಅವರದು. ಅವರ ಸ್ವಭಾವ ನನಗೆ ಗೊತ್ತಿದ್ದುದರಿಂದ, ಒಂದು ಬಾರಿಗೆ ಒಂದೇ ಪ್ರಶ್ನೆ ಕೇಳಬೇಕೆಂದು ಎಚ್ಚರಿಕೆ ಕೊಟ್ಟಿದ್ದೆ. ಇದರಿಂದ ನಾನೂ ಯೋಚಿಸಿ ಸರಿಯಾದ ಉತ್ತರ ಕೊಡಲು ಸಮಯ ಸಿಗುತ್ತೆ ಎನ್ನುವುದು ನನ್ನ ಎಣಿಕೆಯಾಗಿತ್ತು.



**ಪ್ರವಾಸಕ್ಕೆ ಹೊರಟಿರುವ ಮಕ್ಕಳು**

ಮಹಾದೇವ ಮತ್ತು ಮಾಧವ, ಬಸ್ಸು ಹೊರಡುವವರೆಗೂ ಸುಮ್ಮನಿದ್ದರು. ನಂತರ ಒಬ್ಬರ ನಂತರ ಒಬ್ಬರು ಪ್ರಶ್ನೆಗಳನ್ನು ಕೇಳತೊಡಗಿದರು. ಮಹಾದೇವ ಕೇಳಿದ "ಮೇಡಂ, ಶ್ರವಣಬೆಳಗೊಳ ಬೆಂಗಳೂರಿನಿಂದ ಎಷ್ಟು ದೂರ? ಅದು ಯಾವ ಜಿಲ್ಲೆಗೆ ಸೇರಿದ್ದು?"

ಅದಕ್ಕೆ ನಾನು, "ಶ್ರವಣಬೆಳಗೊಳ ಬೆಂಗಳೂರಿನಿಂದ ನೂರಾಅರವತ್ತು ಕಿಲೋಮಿಟರ್ ದೂರ ಇದೆ. ಇದು ಹಾಸನ ಜಿಲ್ಲೆಯಲ್ಲಿ ಇದೆ. ಹಾಸನದಿಂದ ಮೂವತ್ತೆರಡು ಕಿಲೋಮಿಟರ್ ದೂರ ಇದೆ."

ಮಾಧವ ಕೇಳಿದ "ಆ ಊರಿಗೆ ಶ್ರವಣಬೆಳಗೊಳ ಅಂತ ಯಾಕೆ ಕರೀತಾರೆ?"

ಈ ಊರಿನಲ್ಲಿ ಶ್ರವಣರು ಬಂದು ಒಂದು ಕಾಲದಲ್ಲಿ ತಪಸ್ಸು ಮಾಡುತ್ತಿದ್ದರಂತೆ. ಶ್ರವಣರು ಅಂದರೆ ಜೈನ ಸನ್ಯಾಸಿಗಳು. ಆದ್ದರಿಂದ ಶ್ರವಣಬೆಳಗೊಳ ಅಂತ ಕರೆಯುವರು.



**ಬೆಟ್ಟದ ಮೇಲೆ ಬಾಹುಬಲಿ ಮತ್ತು ಮಕ್ಕಳು**

ಕೂಡಲೇ ಮಾಧವ "ಶ್ರವಣ ಅಂತ ನೀವು ಹೇಳಿದ್ದು ಏನೋ ಸರಿಹೋಯ್ತು. ಆದರೆ ಬೆಳಗೊಳ ಅಂತ ಯಾಕೆ ಸೇರಿಸಿದ್ದಾರೆ" ಅಂತ ಕೇಳಿದ.

"ಈ ಊರಿನ ಮಧ್ಯ ಒಂದು ಬಿಳಿ ಸರೋವರವಿದೆ. ಅದನ್ನು ಹಿಂದೆ 'ಬೆಳ್ಗೊಳ' ಅಂತ ಕರೆಯುತ್ತಿದ್ದರಂತೆ. ಹೀಗೆ ಶ್ರವಣಬೆಳಗೊಳ ಆಯ್ತು."

'ಜಿನ'ನನ್ನು ಪೂಜಿಸುವವರನ್ನು ಜೈನರು ಎನ್ನುವರು. ಅವರ ಧರ್ಮವನ್ನೇ ಜೈನಧರ್ಮ ಎನ್ನುವರು. 'ಜಿನ'ನಿಂದ ಹೇಳಲ್ಪಟ್ಟ ಧರ್ಮವೇ ಜೈನಧರ್ಮ. 'ಜಿನ' ಎಂದರೆ 'ಗೆದ್ದವನು' ಎಂಬ ಅರ್ಥವಿದೆ. ಅಂದರೆ "ಜಿನ"ನಾದವನು ತನ್ನ ಕಾಮ,

ಕ್ರೋಧ. ಆಸೆಗಳನ್ನು ಜಯಿಸಿರುತ್ತಾನೆ. ಜೈನಧರ್ಮದ ಮುಖ್ಯ ಲಕ್ಷಣಗಳು - ಅಹಿಂಸೆ, ತ್ಯಾಗ ಮತ್ತು ವೈರಾಗ್ಯ. ಜೈನ ದೇವಾಲಯಗಳನ್ನು 'ಬಸದಿಗಳು' ಎಂದು ಕರೆಯುವರು. ಜೈನಧರ್ಮದ ಸ್ಥಾಪಕ ವೃಷಭದೇವ. ಈತನನ್ನು ಆದಿನಾಥ ಅಂತಲೂ ಕರೆಯುತ್ತಾರೆ. ಜೈನಧರ್ಮದಲ್ಲಿ ಇಪ್ಪತ್ನಾಲ್ಕು ಜನ ತೀರ್ಥಂಕರರು ಇದ್ದಾರೆ. 'ಕೇವಲಜ್ಞಾನ'ವನ್ನು ಪಡೆದವರನ್ನು ತೀರ್ಥಂಕರರು ಎನ್ನುತ್ತಾರೆ. 'ವರ್ಧಮಾನ ಮಹಾವೀರನು ಕೊನೆಯ ತೀರ್ಥಂಕರ. ಜೈನರು ತೀರ್ಥಂಕರರ ಮೂರ್ತಿಗಳನ್ನು ಪೂಜಿಸುತ್ತಾರೆ. ವೃಷಭದೇವನ ತಂದೆ ತಾಯಿಗಳು ನಾಭಿರಾಜ ಮತ್ತು ಮೆರುದೇವಿ. ಈತನು ಅಯೋಧ್ಯೆಯಲ್ಲಿ ರಾಜ್ಯವಾಳುತ್ತಿದ್ದನು. ಇವನು ಜೈನರ ಮೊದಲ ಚಕ್ರವರ್ತಿ ಕೂಡ ಹೌದು.

ಇವನಿಗೆ ಇಬ್ಬರು ಹೆಂಡತಿಯರು. ಅವರ ಹೆಸರು ಯಶಸ್ವ ಮತ್ತು ಸುನಂದೆ. ಯಶಸ್ವತಿಗೆ ಭರತನೆಂಬ ಮಗ, ಬ್ರಾಹ್ಮೀ ಎಂಬ ಮಗಳು ಜನಿಸಿದರು. ನಂತರ ಭರತನಿಗೆ ತೊಂಬತ್ತೊಂಬತ್ತು ಮಂದಿ ಸಹೋದರರು ಆದರು. ಸುನಂದೆಗೆ ಬಾಹುಬಲಿ ಎಂಬ ಮಗ, ಸುಂದರಿ ಎಂಬ ಮಗಳು ಹುಟ್ಟಿದರು.

ಹೀಗೆ ಸುಖ ಸಂತೋಷದಿಂದ ವೃಷಭನಾಥನು ರಾಜ್ಯವಾಳುತ್ತಿದ್ದನು. ಈತನ ಕೀರ್ತಿ ದೇವೇಂದ್ರನವರೆಗೂ ಹರಡಿತ್ತು. ದೇವೇಂದ್ರ ಒಮ್ಮೆ ತನ್ನ ಅಪ್ಸರೆಯರ ಜೊತೆ ಬಂದನು. ಇವನಲ್ಲಿ ವೈರಾಗ್ಯ ಹುಟ್ಟಿಸುವುದೇ ಅವನ ಉದ್ದೇಶವಾಗಿತ್ತು. ಅದಕ್ಕಾಗಿ ಸ್ವಲ್ಪ ಸಮಯದಲ್ಲಿ ಸಾಯಲಿದ್ದ ನೀಲಾಂಜನೆ ಎಂಬ ಅಪ್ಸರೆಯನ್ನು ಕರೆದುಕೊಂಡು ಬಂದಿದ್ದನು. ಅವಳು ನಾಟ್ಯದಲ್ಲಿ ಪ್ರವೀಣೆ ಆಗಿದ್ದಳು. ವೃಷಭದೇವನ ಆಸ್ಥಾನದಲ್ಲಿ ಅವಳ ನರ್ತನ ಶುರು ಆಯ್ತು. ಅವಳು ಮನೋಹರವಾಗಿ ನರ್ತಿಸಿದಳು. ಅವಳ ಆಯುಷ್ಯ ಮುಗಿಯಿತು. ಅವಳು ಮಾಯವಾದಳು. ಆಗ ದೇವೇಂದ್ರ ಅವಳಂತೆ ಕಾಣುವ ಇನ್ನೊಬ್ಬಳನ್ನು ಸೃಷ್ಟಿಸಿದನು. ನರ್ತನ ಮುಂದುವರಿಯಿತು. ಆದರೆ ನೀಲಾಂಜನೆಯ ಸಾವಿನ ವಿಷಯ ಆದಿನಾಥನಿಗೆ ತಿಳಿಯಿತು. ಆಗ ಅವನಲ್ಲಿ ವೈರಾಗ್ಯ ಹುಟ್ಟಿತು. ಸಂಸಾರದ ಸುಖಗಳು ಅವನಿಗೆ ಬೇಡವಾದವು. ಆಗ ವೃಷಭದೇವನು ತನ್ನ ಹಿರಿಯ ಮಗ ಭರತನನ್ನು ಅಯೋಧ್ಯೆಯ ರಾಜನನ್ನಾಗಿ ಮಾಡಿದನು. ಬಾಹುಬಲಿಯನ್ನು ಪೌದನಪುರದ

ಯುವರಾಜನನ್ನಾಗಿ ಮಾಡಿದನು. ಉಳಿದವರಿಗೂ ತನ್ನ ರಾಜ್ಯವನ್ನು ಹಂಚಿದನು. ನಂತರ ಆತನು ಜಿನದೀಕ್ಷೆ ಪಡೆದನು. ತಪಸ್ಸು ಮಾಡಲು ಕಾಡಿಗೆ ಹೋದನು. ನಂತರ 'ಕೇವಲ ಜ್ಞಾನ' ಪಡೆದು ಜಿನನಾದನು.

ಇಷ್ಟು ಹೇಳುವ ಹೊತ್ತಿಗೆ ನಾವು ಶ್ರವಣಬೆಳಗೊಳದ ಹತ್ತಿರ ಬಂದೆವು. ಮಹದೇವ ಮತ್ತು ಮಾಧವ ದೂರದಿಂದಲೇ ಗೊಮ್ಮಟೇಶ್ವರನನ್ನು ನೋಡಿದರು. ಅವರು ಮೊದಲು ತಲೆಯನ್ನು ಕಂಡರಂತೆ, ನಂತರ ಭುಜಗಳು, ನಂತರ ಹೊಟ್ಟೆಯ ಭಾಗದವರೆಗೂ ನೋಡಿದರು. ನಮ್ಮ ಹುಡುಗರ ಉತ್ಸಾಹ ಹೇಳತೀರದಾಗಿತ್ತು. ಮೊದಲು ಗೊಮ್ಮಟೇಶ್ವರನಿರುವ ಇಂದ್ರಗಿರಿಬೆಟ್ಟಕ್ಕೆ ಹೋದೆವು.

ಇಂದ್ರಗಿರಿಗೆ, ಇನ್ನೂ ಎರಡು ಹೆಸರುಗಳು ಇವೆ. ದೊಡ್ಡಬೆಟ್ಟ ಅಥವಾ ವಿಂಧ್ಯಗಿರಿ ಎಂದು. ಈ ಬೆಟ್ಟ, ಸುಮಾರು ಮೂರೂವರೆ ಸಾವಿರ ಅಡಿ ಎತ್ತರವಿದೆ. ಇದರ ತುದಿಗೆ ಹೋಗಲು ಆರುನೂರು ಮೆಟ್ಟಿಲುಗಳಿವೆ. ಇಷ್ಟು ಹೇಳುತ್ತಿರುವಾಗಲೇ ಮಾಧವ ಕೇಳಿದ, ನಾವು ಹುಡುಗರು ಸುಲಭವಾಗಿ ಮೆಟ್ಟಿಲು ಹತ್ತುತ್ತೇವೆ. ಆದರೆ ಮುದುಕರು ಹೇಗೆ ಹತ್ತುತ್ತಾರೆ? ಅವರಿಗೆ ತುಂಬಾ ಕಷ್ಟ ಅಲ್ಲವೆ? ಅವರು ಗೊಮ್ಮಟನನ್ನು ನೋಡದೆ ಹೋಗಬೇಕಾಗುತ್ತೋ ಏನೋ ಮೇಡಂ, ಅಂದ. ಇವನು ಕೇಳೋದು ಕೂಡ ಸರಿಯಾದ ಪ್ರಶ್ನೆ ಎಂದುಕೊಂಡೆ. ಇಲ್ಲಿ ಮುದುಕರನ್ನು ಎತ್ತಿಕೊಂಡು ಹೋಗುವ 'ಡೋಲಿ'ಗಳು ಇವೆ. ಅವರನ್ನು ಗೊಮ್ಮಟೇಶ್ವರನ ಹತ್ತಿರ ಇಳಿಸುತ್ತಾರೆ. ಹೀಗೆ ಗೊಮ್ಮಟೇಶ್ವರನನ್ನು ಎಲ್ಲರೂ ನೋಡಬಹುದು. "ಬೇಗ ಬೇಗ ಹತ್ತಿ. ಬಿಸಿಲು ಏರುವುದರೊಳಗೆ ಮೇಲೆ ಹೋಗೋಣ. ಎಡಕ್ಕೆ ಮತ್ತು ಬಲಕ್ಕೆ ಎರಡೂ ಕಡೆ ಹೆಜ್ಜೆ ಹಾಕಿ. ಆಗ ಸುಸ್ತು ಆಗುವುದಿಲ್ಲ. ಅರ್ಚನಾ ಮಧ್ಯೆ ಮಧ್ಯೆ ನೀರು ಕುಡೀಬೇಡ. ತಲೆಸುತ್ತು ಬರಬಹುದು" ಅಂದೆ. ಕೆಲವರು ಓಡಿ ಓಡಿ ಹತ್ತಿದರು. ಇನ್ನು ಕೆಲವರು ನಿಧಾನವಾಗಿ ಏರಿದರು. ಇನ್ನು ಕೆಲವರು ಮೆಟ್ಟಿಲ ಮೇಲೆ ಕುಳಿತು ಸುಧಾರಿಸಿಕೊಂಡು ಮತ್ತೆ ಹೆಜ್ಜೆ ಹಾಕಿದರು. ಕೊನೆಗೆ ಎಲ್ಲರೂ ಹತ್ತಿದೆವು. ಎಲ್ಲರಿಗೂ ಆಶ್ಚರ್ಯ.

ಅಬ್ಬಾ ಅಬ್ಬಾ ಎಷ್ಟು ಎತ್ತರವಾಗಿದೆ! ನಾವು ತಲೆಯನ್ನು ಹಿಂದಕ್ಕೆ ಬಗ್ಗಿಸಿ ನೋಡಬೇಕಲ್ಲ! ಅಯ್ಯೊ ಅಯ್ಯೊ ಎಷ್ಟು ಚಂದ ಇದೆ ಕಣೆ! ಕಿವಿ, ಕೈಗಳು ಎಷ್ಟು ಉದ್ದ ಇವೆ ನೋಡೆ, ಅಲ್ಲಿ ನಿಂತುಕೊಂಡು ನೋಡೆ, ನಾವು ಯಾರೂ ವಿಗ್ರಹದ ಪಾದದ ಎತ್ತರಕ್ಕೂ ಬರುವುದಿಲ್ಲ! ಕೂದಲು ಗುಂಗುರು ಗುಂಗುರು, ವಿಶಾಲವಾದ ಹಣೆ, ನಗುಮುಖ ಎಷ್ಟು ನೋಡಿದರೂ ನೋಡ್ತಾನೆ ಇರಬೇಕು ಅನ್ನಿಸುತ್ತೆ. ಹೀಗೆ ಒಬ್ಬೊಬ್ಬರು ಒಂದೊಂದು ರೀತಿ ಹೇಳುತ್ತಿದ್ದರು. ಮೆಟ್ಟಿಲು ಹತ್ತಿ ಬಂದ ಆಯಾಸ ಅವರನ್ನು ಬಿಟ್ಟು ಓಡಿಹೋಗಿತ್ತು.

ನನ್ನ ಇಬ್ಬರು ಪ್ರಿಯ ಶಿಷ್ಯರು ನನ್ನ ಕಡೆ ನೋಡುತ್ತಿದ್ದರು. ವಿಗ್ರಹದ ಬಗೆಗಿನ ವಿಶೇಷವನ್ನು ಕೇಳಲು ಅವರಿಗೆ ಆತುರವಿತ್ತು. ನಾನು ಶುರುಮಾಡಿದೆ. ಗೊಮ್ಮಟೇಶ್ವರನ ಮೊದಲ ಹೆಸರು ಬಾಹುಬಲಿ. ಈತನಿಗೆ ಭುಜಬಲಿ ಮತ್ತು ಕಾಮದೇವ ಎಂದೂ ಕರೆಯುತ್ತಾರೆ. "ಈ ಮೂರ್ತಿ ಹೇಗೆ ಕಾಣುತ್ತಿದೆ?" ಇದು ಬೆತ್ತಲೆಯಾಗಿದೆ. "ಕಾಲುಗಳ ಹತ್ತಿರ ಮತ್ತು ಕೈಗಳ ಮೇಲೆ ಏನು ಕಾಣುತ್ತೆ." ಕಾಲುಗಳ ಹತ್ತಿರ ಹುತ್ತದಿಂದ ಎದ್ದ ಸರ್ಪಗಳಿವೆ. ಕೈಗಳ ಮೇಲೆ ಬಳ್ಳಿಗಳು ಹಬ್ಬಿವೆ. ಆದ್ದರಿಂದ ಈ ಮೂರ್ತಿ ಕಾಡಿನಲ್ಲಿ ತಪಸ್ಸು ಮಾಡುವ ಹಾಗೆ ಕಾಣುತ್ತದೆ." ಎಲ್ಲರಿಗೂ ತಿಳಿಯಲಿ ಎಂದು ನಾನು ಮುಂದುವರಿಸಿದೆ. ಗೊಮ್ಮಟೇಶ್ವರ ನಿಂತ ಬಗೆಯನ್ನು 'ಪ್ರತಿಮಾಯೋಗ' ಅಥವಾ 'ಖಡ್ಗಾಸನ' ಅಂತ ಕರೆಯುತ್ತಾರೆ. ಅವನು ತ್ಯಾಗದ ಮಹಿಮೆಯನ್ನು ಜಗತ್ತಿಗೆ ಹೇಳುತ್ತಿದ್ದಾನೆ. ಬೆತ್ತಲೆಯ ಅರ್ಥ ತ್ಯಾಗವೇ ಆಗಿದೆ. ಇದನ್ನು ನೋಡಿದರೆ ನಮಗೆ ನಾಚಿಕೆ ಅನಿಸುವುದಿಲ್ಲ. ಏಕೆಂದರೆ ಗೊಮ್ಮಟೇಶ್ವರ ತನ್ನ ಧ್ಯಾನದಲ್ಲಿ ಪ್ರಪಂಚವನ್ನು ಮರೆತು ಬಿಟ್ಟಿದ್ದಾನೆ. ಈ ಮೂರ್ತಿಯಲ್ಲಿ ಆಳವಾದ ಗಾಂಭೀರ್ಯವಿದೆ. ಅಪೂರ್ವ ಕಳೆ ಇದೆ. ಇದನ್ನು ನೋಡುತ್ತಿದ್ದ ಹಾಗೆ ಕಣ್ಣು ತುಂಬಿ, ಮನಸ್ಸು ಹಗುರವಾಗಿ, ತಲೆ ತಾನಾಗಿ ಬಾಗುತ್ತದೆ. ಪೂಜೆ ಮಾಡುತ್ತೇವೆ. ನಮ್ಮ ಬಯಕೆಗಳನ್ನು ಈಡೇರಿಸು ತಂದೆ ಎಂದು ಬೇಡುತ್ತೇವೆ.

ಈ ಗೊಮ್ಮಟನ ಮೂರ್ತಿಯನ್ನು ಒಬ್ಬ ಶಿಲ್ಪಿ ಕೆತ್ತಿದನೆ? ಅನೇಕರು ಸೇರಿ ಕೆತ್ತಿದರೆ? ಎಂಬ ಪ್ರಶ್ನೆಗಳು ಇನ್ನೂ ನಮ್ಮನ್ನು ಕಾಡುತ್ತಿವೆ. ಐವತ್ತೇಳು ಅಡಿ

ಎತ್ತರದ ಗೊಮ್ಮಟೇಶ್ವರನನ್ನು ನೋಡಿದರೆ ಯಾರಿಗಾದರೂ ಬರುವ ಪ್ರಶ್ನೆ ಅದು. ಈ ಮೂರ್ತಿಯ ಅಂಗಾಂಗಗಳೆಲ್ಲಾ ಪ್ರಮಾಣಬದ್ಧವಾಗಿವೆ. ಇಷ್ಟೊಂದು ಸುಂದರವಾಗಿ ಒಬ್ಬ ಶಿಲ್ಪಿ ಕೆತ್ತಿರಲಾರ ಅನ್ನುವ ಸಂಶಯ ಬರುತ್ತದೆ.

ಗೊಮ್ಮಟ ಮೂರ್ತಿಯ ಪಾದದ ಎಡಬಲಗಳಲ್ಲಿ ಒಂದೊಂದು ಸಾಲಿನ ಶಾಸನಗಳಿವೆ. ಅವುಗಳು ಕನ್ನಡ, ತಮಿಳು ಮತ್ತು ಮರಾಠಿ ಭಾಷೆಯಲ್ಲಿವೆ. ಇಷ್ಟು ಹೇಳುವುದೇ ತಡ, ಮಹದೇವ ಓಡಿಹೋಗಿ ಕನ್ನಡದ ಶಾಸನ ಓದಿಬಂದ.

"ಶ್ರೀ ಚಾಮುಂಡರಾಯಂ ಮಾಡಿಸಿದಂ"

"ಶ್ರೀ ಚಾಮುಂಡರಾಜಂ ಕೆಯ್ವಿವಿತ್ತಾನ್"

"ಶ್ರೀ ಚಾಮುಂಡರಾಜೇ ಕರವಿಯಲೆ"

ನಂತರ ತನ್ನ ಸ್ನೇಹಿತರಿಗೆಲ್ಲಾ ಹೇಳಿದ, "ಇದನ್ನು ಚಾಮುಂಡರಾಯನೇ ಕೆತ್ತಿಸಿದ್ದಾನೆ"

ಅದಕ್ಕೆ ನಾನು ಒಂದು ಮಾತು ಸೇರಿಸಿದೆ. ಇದನ್ನು ಕೆತ್ತಲು ಶಿಲ್ಪಿ ಈ ಬೆಟ್ಟದ ಕಣಶಿಲೆಯನ್ನು ಆರಿಸಿಕೊಂಡಿದ್ದಾನೆ.

ಇದನ್ನು ಮೇಲಿನಿಂದ ಆರಂಭಿಸಿ, ಕೆಳಗಿನವರೆಗೆ ಕೆತ್ತಲಾಗಿದೆ. ಶಿಲ್ಪಿಗಳು ಇದರಲ್ಲಿ ಆರು ಲಕ್ಷಣಗಳನ್ನು ಗುರುತಿಸಿದ್ದಾನೆ. (೧) ಮುಗುಳುನಗೆಯ ಉನ್ನತ ಭಂಗಿ (೨) ಗುಂಗುರು ಕೂದಲು, ಅಗಲ ಹಣೆ, ಉದ್ದನೆಯ ಕಿವಿಗಳು (೩) ಕೈಕಾಲುಗಳಿಗೆ ಸುತ್ತಿರುವ ಮಾಧವಿ ಬಳ್ಳಿಗಳು (೪) ಕಾಲುಗಳ ಬಳಿ ಇರುವ ಹುತ್ತಗಳು (೫) ಸರ್ಪಗಳು (೬) ಬ್ರಾಹ್ಮೀ ಸುಂದರಿಯರು.

ಇದನ್ನು ಕೇಳಿಸಿಕೊಳ್ಳುತ್ತಿದ್ದ ಮಾಧವ ತಟ್ಟನೆ ಪ್ರಶ್ನೆ ಮಾಡಿದ "ಮೇಡಂ", ಈ ಮೂರ್ತಿಯ ಪ್ರಮಾಣಬದ್ಧ ಅಳತೆ ಮಾಡಿರುವರಾ? ಇಲ್ಲದಿದ್ದರೆ ನಾವು

ಮಾಡಬಹುದಲ್ಲ?" ಅದಕ್ಕೆ ನಾನು "ಅಳತೆ ಮಾಡುವ ಶ್ರಮ ನಮಗೆ ಬೇಡ. ಆ ಕೆಲಸವನ್ನು ಆಗಲೇ ಮಾಡಿದ್ದಾರೆ. ಬೇಕಾದರೆ ಬರೆದುಕೊ ಹೇಳುತ್ತೇನೆ ಎಂದೆ. ಈ ಮೂರ್ತಿಯ ಒಂದು ಭುಜದಿಂದ ಇನ್ನೊಂದು ಭುಜದವರೆಗಿನ ಅಗಲ ಇಪ್ಪತ್ತಾರು ಅಡಿ, ಸೊಂಟದ ಸುತ್ತಳತೆ ಹತ್ತು ಅಡಿ, ನಡುಬೆರಳಿನ ಉದ್ದ ಐದುವರೆ ಅಡಿ, ಪಾದದ ಉದ್ದ ಒಂಬತ್ತು ಅಡಿ, ಹೆಬ್ಬೆರಳ ಉದ್ದ ಎರಡು ಅಡಿ, ಒಂಬತ್ತು ಇಂಚು, ಒಂದೊಂದು ಪಾದದ ಅಗಲ ನಾಲ್ಕು ಅಡಿ ಆರು ಇಂಚು, ಮೂರ್ತಿಯ ಒಟ್ಟು ಎತ್ತರ ಐವತ್ತೇಳು ಅಡಿ. ಈ ಅಳತೆಗಳಿಂದ ನಿನಗೆ ಏನು ಗೊತ್ತಾಯಿತು?" ಅಂತ ನಾನು ಕೇಳಿದ್ದಕ್ಕೆ ಮಹದೇವ ಹೇಳಿದ "ಗೊಮ್ಮಟೇಶ್ವರನ ಬೃಹತ್ ಸ್ವರೂಪ ತಿಳಿಯುತ್ತೆ". "ಇದನ್ನು ಕೆತ್ತಿ ಎಷ್ಟು ವರ್ಷ ಆಗಿದೆ ಮೇಡಂ?" ಅಂತ ಮಾಧವನ ಪ್ರಶ್ನೆ. "ಇದನ್ನು ಕೆತ್ತಿ ಒಂದು ಸಾವಿರ ವರ್ಷಗಳ ಮೇಲೆ ಅನೇಕ ವರ್ಷಗಳು ಆಗಿವೆ."

ಈ ತಿಂಗಳು ಹತ್ತೊಂಬತ್ತನೇ ತಾರೀಖು ಇಲ್ಲಿ ಏನೋ ನಡೆಯುತ್ತೆ ಅಂತ ಹೇಳಿದಿರಲ್ಲ, ದಯವಿಟ್ಟು ಇನ್ನೊಮ್ಮೆ ಹೇಳಿ "ಅಂತ ಮಹದೇವ ಕೇಳಿದ." ಹತ್ತೊಂಬತ್ತನೇ ತಾರೀಖು ಇಲ್ಲಿ ಗೊಮ್ಮಟೇಶ್ವರನಿಗೆ'ಮಹಾಮಸ್ತಕಾಭಿಷೇಕ' ನಡೆಯುತ್ತದೆ. ಇದು ಪ್ರತಿ ಹನ್ನೆರಡು ವರ್ಷಕ್ಕೆ ಒಂದು ಬಾರಿ ನಡೆಯುತ್ತದೆ. ಇದಕ್ಕಾಗಿ ಮುಹೂರ್ತವನ್ನು ಗೊತ್ತು ಮಾಡಿರುತ್ತಾರೆ. ಇದನ್ನು ನೋಡಲು ಜೈನಭಕ್ತರು ದೇಶದ ಎಲ್ಲ ಕಡೆಯಿಂದ ಬರುತ್ತಾರೆ. ಪ್ರವಾಸಿಗರೂ ಬರುತ್ತಾರೆ. ವಿದೇಶೀಯರೂ ಬರುತ್ತಾರೆ. ಆರು ನೂರು ವರ್ಷಗಳ ಹಿಂದೆ, ಮೊದಲ ಮಸ್ತಕಾಭಿಷೇಕ ನಡೆಯಿತು ಅಂತ ಶಾಸನಗಳು ಹೇಳಿವೆ."



"ಮೇಡಂ, ಬಾಹುಬಲಿಯ ಪಾದಗಳ ಪಕ್ಕದಲ್ಲಿ ಒಬ್ಬ ಅಜ್ಜಿ ಕುಡಿಕೆ ಹಿಡಿದುಕೊಂಡು ಕುಳಿತಿರುವಳಲ್ಲ - ಅವಳು ಯಾರು? ಅವಳ ಕಥೆ ಏನು? ಇಷ್ಟೊಂದು ದೊಡ್ಡ ಮೂರ್ತಿಯನ್ನು ಕೆತ್ತಿದ ಶಿಲ್ಪಿಯ ಹೆಸರು ಇನ್ನೂ ತಿಳಿದಿಲ್ಲವೆ?" ಅಂತ ಕುತೂಹಲದಿಂದ ಕೇಳಿದ. ಅಲ್ಲದೆ ನಾವು ಮಸ್ತಕಾಭಿಷೇಕ ನೋಡಿದ್ದರೆ ಚೆನ್ನಾಗಿತ್ತು ಅಂತ ಪದೇ ಪದೇ ಹೇಳಿದ. ಅದಕ್ಕೆ ನಾನು, ಮಸ್ತಕಾಭಿಷೇಕವನ್ನು ನಾವು ದೂರದರ್ಶನದಲ್ಲಿ ಆರಾಮವಾಗಿ ನೋಡೋಣ ಅಂತ ಸಮಾಧಾನ ಹೇಳಿದೆ. ಇನ್ನು ಆ ಅಜ್ಜಿಯನ್ನು

ಗುಳ್ಳೆಕಾಯಿ ಅಜ್ಜಿ ಅಂತ ಕರೆಯುತ್ತಾರೆ. ಅಜ್ಜಿಯ ವಿಷಯ ತಿಳಿದುಕೊಳ್ಳಬೇಕಾದರೆ ಚಾಮುಂಡರಾಯನ ವಿಷಯ ಮೊದಲು ತಿಳಿಯಬೇಕು. ಆಗ ಶಿಲ್ಪಿಯ ಹೆಸರೂ ಗೊತ್ತಾಗುತ್ತದೆ ಅಂದೆ. ಅದಕ್ಕೆ ಮಹದೇವ ಮತ್ತು ಮಾಧವ ಇಬ್ಬರೂ, ಚಾವುಂಡರಾಯನ ಕಥೆ ಹೇಳಿ, ಈ ಗುಳ್ಳೆಕಾಯಿ ಅಜ್ಜಿ ಕಥೆ, ಹೇಳಿ ಅಂತ ಕಾಡಿಸಿದರು. ನಾನು ಹೇಳಲು ಪ್ರಾರಂಭಿಸಿದೆ.

"ತಲಕಾಡಿನ ಗಂಗರು ಕರ್ನಾಟಕದ ಅನೇಕ ಕಡೆ ರಾಜ್ಯವಾಳಿದರು. ಇವರ ಆಡಳಿತ ಕ್ರಿಸ್ತಶಕ ನಾಲ್ಕರಿಂದ ಹತ್ತನೇ ಶತಮಾನದವರೆಗೆ ನಡೆಯಿತು. ಅವರ ಕಾಲದಲ್ಲಿ ಜೈನಧರ್ಮ ರಾಜಧರ್ಮವಾಗಿತ್ತು. ದೊರೆಗಳು ಜಿನಾಲಯಗಳನ್ನು ಕಟ್ಟಿಸಿದರು. ಜಿನಮೂರ್ತಿಗಳನ್ನು ಸ್ಥಾಪಿಸಿದರು. ಜೈನಸಾಧುಗಳಿಗೆ ಗುಹೆಗಳನ್ನು ಮಾಡಿಕೊಟ್ಟರು. ಜೈನಗುರುಗಳಿಗೆ ದಾನಕೊಟ್ಟರು. ಈ ವಂಶದ ಪ್ರಸಿದ್ಧ ದೊರೆಗಳು ಮಾರಸಿಂಹ ಮತ್ತು ಅವನ ಮಗ ರಾಜಮಲ್ಲಿ. ಇವರಿಬ್ಬರಿಗೂ ಚಾವುಂಡರಾಯ ಮೊದಲ ದಂಡನಾಯಕನಾಗಿದ್ದನು. ನಂತರ ಮಂತ್ರಿ ಆದನು. ಈತನು ಧರ್ಮಕಾರ್ಯಗಳನ್ನು ಮಾಡುತ್ತಿದ್ದನು. ಚಾವುಂಡರಾಯನ ಗುರು ನೇಮಿಚಂದ್ರ ಮುನಿ. ಅವನು ತನ್ನ ಶಿಷ್ಯನನ್ನು ಪ್ರೀತಿಯಿಂದ ಗೊಮ್ಮಟನೆಂದು ಕರೆದನು. ಗೊಮ್ಮಟನೆಂದರೆ ಸುಂದರ ಎಂಬ ಅರ್ಥ ಇದೆ. ಈ ಗೊಮ್ಮಟನು ಸ್ಥಾಪಿಸಿದ ಮೂರ್ತಿಗೆ ಗೊಮ್ಮಟೇಶ್ವರನೆಂದು ಹೆಸರಾಯಿತು. ಈ ವಿಗ್ರಹವೂ ಸುಂದರವಾಗಿರುವುದರಿಂದ ಈ ಹೆಸರು ಬಲು ಚೆನ್ನಾಗಿ ಒಪ್ಪುತ್ತದೆ.

ಚಾವುಂಡರಾಯ ತನ್ನ ತಾಯಿಯ ಆಸೆಯನ್ನು ನೆರವೇರಿಸಲು ಈ ವಿಗ್ರಹವನ್ನು ಕೆತ್ತಿಸಿದನು. ಮೊದಲು ಬಾಹುಬಲಿಯ ವಿಗ್ರಹವನ್ನು ಭರತೇಶನು ಪೌದನಪುರದಲ್ಲಿ ಸ್ಥಾಪಿಸಿದನು. ಅದನ್ನು ನೋಡಬೇಕೆಂದು ಚಾವುಂಡರಾಯನ ತಾಯಿ ಆಸೆ ಪಟ್ಟಳು. ಆದರೆ ಅಲ್ಲಿಗೆ ಹೋಗುವ ದಾರಿ ತುಂಬಾ ಕಷ್ಟದ್ದು. ಆದ್ದರಿಂದ ಚಾವುಂಡರಾಯ ಅದೇ ರೀತಿಯ ವಿಗ್ರಹ ಕೆತ್ತಿಸಲು ಮನಸ್ಸು ಮಾಡಿ, ಈ ಪರ್ವತದ ಮೇಲೆ ಬಾಹುಬಲಿಯನ್ನು ಸ್ಥಾಪಿಸಿದನು. ಐವತ್ತೇಳು ಅಡಿಗಳ ಏಕಶಿಲೆಯ ಈ ಮೂರ್ತಿಯನ್ನು 'ಅರಿಷ್ಟನೇಮಿ' ಎಂಬ ಶಿಲ್ಪಿ ಕೆತ್ತಿದನು ಎಂದು ಹೇಳುತ್ತಾರೆ.

ಇನ್ನು ಗುಳ್ಳೆಕಾಯಿ ಅಜ್ಜಿ ಕಥೆ. ಚಾವುಂಡರಾಯ ಬಾಹುಬಲಿ ಮೂರ್ತಿಯನ್ನು ಸ್ಥಾಪಿಸಿದ ಮೇಲೆ ಮಹಾ ಮಸ್ತಕಾಭಿಷೇಕ ಮಾಡುವಾಗ ನಡೆದ ಕಥೆ ಇದು. ಈ



**ಚಾವುಂಡರಾಯನ ತಾಯಿ ತನ್ನ ಆಸೆ ವ್ಯಕ್ತಪಡಿಸುತ್ತಿದ್ದಾಳೆ**

ವಿಗ್ರಹವನ್ನು ನೋಡಿದವರೆಲ್ಲ ಮೆಚ್ಚಿದರು. ಚಾವುಂಡರಾಯನಲ್ಲಿ ಧನ್ಯತೆಯ ಜೊತೆ ಅಹಂಕಾರ ಸೇರಿತು. ಅವನ ಅಹಂಕಾರ ಮುರಿಯುವ ಸಮಯ ಬಂತು. ಅವನು ಅಭಿಷೇಕ ಮಾಡಲು ಸಿದ್ಧನಾಗಿ, ಬಾಹುಬಲಿ ಮೂರ್ತಿಯ ನೆತ್ತಿಯ ಮೇಲೆ ಹಾಲನ್ನು ಸುರಿದ. ಆ ಹಾಲು ಕಾಲಿನವರೆಗೂ ಇಳಿಯಿತು. ಆದರೆ ಪಾದಗಳನ್ನು ನೆನೆಸಲೇ ಇಲ್ಲ. ಅವನು ಅನೇಕ ಕೊಡಗಳ ಹಾಲು ಸುರಿದ. ಆದರೆ ಪಾದಗಳಿಗೆ ಅಭಿಷೇಕ ಆಗಲೇ ಇಲ್ಲ. ಅದೇ ಸಂದರ್ಭದಲ್ಲಿ ದೂರದ ಹಳ್ಳಿಯಿಂದ ಒಬ್ಬ ಮುದುಕಿ ಬಂದಿದ್ದಳು. ಅವಳು ಒಂದು ಪುಟ್ಟ ಕುಡಿಕೆ ಹಾಲು ತಂದಿದ್ದಳು. ಅದನ್ನು ಸ್ವಾಮಿಯ ಪಾದಗಳ ಮೇಲೆ ಹಾಕಿ ಅಭಿಷೇಕ ಮಾಡಬೇಕೆಂದು ಬಯಸಿದ್ದಳು. ಚಾವುಂಡರಾಯನ ಸೇವಕರು ಅವಳನ್ನು ಒಳಗೆ ಬಿಟ್ಟಿರಲಿಲ್ಲ. ಅವಳು ಹೊರಗೆ ನಿಂತುಕೊಂಡು ಸ್ವಾಮಿಯ ದರ್ಶನ ಆಗಲಿಲ್ಲವೆಂದು ದುಃಖಿಸುತ್ತಿದ್ದಳು.

ಈ ಕಡೆ ಚಾವುಂಡರಾಯನು ಮಸ್ತಕಾಭಿಷೇಕವು ಪೂರ್ತಿ ಆಗಲಿಲ್ಲವೆಂದು ಬೇಸರಪಟ್ಟುಕೊಂಡನು. ತನ್ನ ಗುರುಗಳ ಹತ್ತಿರ ಅದರ ಕಾರಣ ಕೇಳಿದನು. ಅದಕ್ಕೆ ಅವರು, "ಯಾರಿಂದಲೂ ದಾನ ಪಡೆಯದೆ, ತನ್ನ ಮನೆಯ ಹಾಲಿಂದ ಅಭಿಷೇಕ ಮಾಡಭೇಕೆಂದು ಬಯಸಿ ಒಬ್ಬ ಮುದುಕಿ ಬಂದಿದ್ದಾಳೆ. ಅವಳು ಒಳ್ಳೆಯ ಮನಸ್ಸಿನಿಂದ ಬಂದಿದ್ದಾಳೆ. ಅಹಂಕಾರವಿಲ್ಲದ ಭಕ್ತಿಯಿಂದ ಬಂದಿದ್ದಾಳೆ. ಅವಳಿಂದ ಅಭಿಷೇಕ ಮಾಡಿಸಿದರೆ ಎಲ್ಲ ಸರಿ ಆದೀತು ಎಂದರು." ಆಗ ಚಾವುಂಡರಾಯನಿಗೆ ತನ್ನ ತಪ್ಪಿನ ಅರಿವಾಯಿತು. ಅವನು ಆ ಮುದುಕಿಯನ್ನು ಕರೆಸಿದನು. ಅವಳು ಮೇಲೆ ಹೋಗಿ ನೆತ್ತಿಯಿಂದ ಅಭಿಷೇಕ ಮಾಡಲು ಅವಕಾಶ ಕೊಟ್ಟನು. ಆ ಮುದುಕಿ ತಾನು ತಂದಿದ್ದ ಕುಡಿಕೆ ಹಾಲನ್ನೇ ನೆತ್ತಿಯ ಮೇಲಿಂದ ಸುರಿದಳು. ಅದು ಇಡೀ ವಿಗ್ರಹವನ್ನು ನೆನೆಸಿತು. ಪಾದಗಳಿಗೂ ಅಭಿಷೇಕವಾಯಿತು.

ಇದರ ನೆನಪಿಗಾಗಿ ಚಾವುಂಡರಾಯ ಗುಳ್ಳೆಕಾಯಜ್ಜಿಯ ವಿಗ್ರಹ ಕೆತ್ತಿಸಿದನು. ಇವಲ್ಲದೆ ಅವನು ಚಾವುಂಡರಾಯನ ಬಸದಿ, ತ್ಯಾಗದ ಬ್ರಹ್ಮದೇವರ ಕಂಬ, ಅಖಂಡ ಬಾಗಿಲುಗಳನ್ನೂ ಕಟ್ಟಿಸಿದ್ದಾನೆ. ಅವನು ಚಾವುಂಡರಾಯ ಪುರಾಣ ಎಂಬ ಪುಸ್ತಕವನ್ನು ಬರೆದಿದ್ದಾನೆ. ಇದರಲ್ಲಿ ಇಪ್ಪತ್ನಾಲ್ಕು ತೀರ್ಥಂಕರ ಕಥೆ ಇದೆ. ಅಲ್ಲದೆ, ಅರವತ್ಮೂರು ಶಲಾಖಾ ಪುರುಷರ ಕಥೆಗಳೂ ಇವೆ."

"ಈಗ ಬೇಗ ಬೇಗ ಇಳಿಯಿರಿ. ಊಟ ಮಾಡಿಕೊಂಡು ಚಂದ್ರಗಿರಿ ನೋಡಬೇಕು. ಇನ್ನೂ ಅನೇಕ ಸ್ಮಾರಕಗಳನ್ನು ನೋಡಬೇಕು. ಬೀಳಬೇಡಿ. ಮೆಲ್ಲನೆ ಇಳಿಯಿರಿ. ಗಲಾಟೆ ಬೇಡ. ಬೇಗ ಹೋಗೋಣ. ನೋಡುವುದು ಇನ್ನೂ ಬಹಳ ಇದೆ."

ಸ್ವಲ್ಪ ಸಮಯದಲ್ಲೆ ಮಹದೇವ ಹೇಳಿದ, ಮೇಡಂ ಬಾಹುಬಲಿಯ ಕಥೆಯನ್ನೇ ಹೇಳಲಿಲ್ಲವಲ್ಲ. ಅದನ್ನು ಈ ರಾತ್ರಿ ಊಟ ಆದಮೇಲೆ ಹೇಳ್ತೀನಿ ಅಂದೆ. ಮಧ್ಯಾಹ್ನದ ಊಟ ಆಯ್ತು. ನಾವು ಶ್ರವಣಬೆಳಗೊಳದ ಚಂದ್ರಗಿರಿಬೆಟ್ಟಕ್ಕೆ ಹೋದೆವು. ಈಗ ನನ್ನ ಶಿಷ್ಯರು ಸ್ವಲ್ಪ ಹಿಂದೆ ಉಳಿದರು. ಕಾರಣ ಕೇಳಿದರೆ ಹೊಟ್ಟೆ ತುಂಬಿದೆ, ಎಲ್ಲ ನೀವೇ ಹೇಳಿ ಮೇಡಂ ಅಂದುಬಿಟ್ಟರು. ನಾನು ಮತ್ತೆ ಶುರು ಮಾಡಿದೆ.

ಚಂದ್ರಗಿರಿ ಬಹಳ ಹಳೆಯ ಬೆಟ್ಟ. ಇದರ ಎತ್ತರ ಸುಮಾರು ಮೂರೂವರೆ ಸಾವಿರ ಅಡಿಗಳು. ಇಲ್ಲಿಗೆ ಮಗಧರಾಜ ಚಂದ್ರಗುಪ್ತ ಮತ್ತು ಆತನ ಗುರು ಭದ್ರಬಾಹು ಬಂದಿದ್ದರಂತೆ. ಮೊದಲು ಇದಕ್ಕೆ ಚಿಕ್ಕಬೆಟ್ಟ ಎಂದು ಹೆಸರಿತ್ತು. ಚಂದ್ರಗುಪ್ತ ಇಲ್ಲಿಗೆ ಬಂದಿದ್ದರಿಂದ ಚಂದ್ರಗಿರಿ ಎಂಬ ಹೆಸರು ರೂಢಿ ಆಯ್ತು. ಚಂದ್ರಗುಪ್ತ ಇಲ್ಲಿಗೆ ತಪಸ್ಸು ಮಾಡಲು ಬಂದಿದ್ದನಂತೆ. ಆಗ ಉತ್ತರ ಭಾರತದಲ್ಲಿ ಬರಗಾಲ. ಅವನ ಜೊತೆ ಅವನ ಗುರು ಮತ್ತು ಅನೇಕ ಶಿಷ್ಯರು ಬಂದಿದ್ದರಂತೆ. ಈ ವಿಷಯ ನಮಗೆ ವಡ್ಡಾರಾಧನೆ ಎಂಬ ಪುಸ್ತಕದಿಂದ ತಿಳಿಯುತ್ತದೆ. ಭದ್ರಬಾಹು ತಪಸ್ಸು ಮಾಡಿದ ಈ ಜಾಗವನ್ನು 'ಭದ್ರಬಾಹು ಬಸದಿ" ಎನ್ನುವರು. ಇಲ್ಲಿ ಹದಿನಾಲ್ಕು ಬಸದಿಗಳಿವೆ. ಅವುಗಳಲ್ಲಿ ಚಾವುಂಡರಾಯ ಬಸದಿ ತುಂಬ ಸುಂದರವಾಗಿದೆ. ಇದನ್ನು ಚಾವುಂಡರಾಯನೇ ಕಟ್ಟಿಸಿದ ಅಂತ ಹೇಳುತ್ತಾರೆ.



ಇಲ್ಲಿ ಬನ್ನಿ, ಚಂದ್ರಗುಪ್ತ ಬಸದಿಯನ್ನು ನೋಡಿ. ಇದನ್ನು ಅಶೋಕ ಚಕ್ರವರ್ತಿ, ತನ್ನ ಅಜ್ಜನ ನೆನಪಿಗೆ ಕಟ್ಟಿಸಿದನಂತೆ. ಇಲ್ಲಿರುವ ಶಾಸನಗಳಲ್ಲಿ ಅನೇಕ ಜಿನ ಗುರುಗಳ ಜೀವನ ಸಂಗತಿಗಳು ಇವೆ. ಅವು ಪ್ರಾಕೃತ ಭಾಷೆಯಲ್ಲಿ ಇವೆ. ಈ ಕಡೆ ಬನ್ನಿ, ಇಲ್ಲಿಯ ಬಸದಿ ನೋಡಿ. ಇದರಲ್ಲಿ ಪಾರ್ಶ್ವನಾಥ ಸ್ವಾಮಿಯ ಸುಂದರ ವಿಗ್ರಹವಿದೆ. ಇನ್ನು ಸ್ವಲ್ಪ ಮುಂದೆ ಹೋಗೋಣ ಅದೇ ಮಾನಸ್ತಂಭ. ಹಿಂದೂ ದೇವಾಲಯಗಳ ಮುಂದೆ ಎತ್ತರವಾದ ಗರುಡಗಂಭ ಇರುವಂತೆ, ಜೈನ ಬಸದಿಗಳ ಮುಂದೆ ಮಾನಸ್ತಂಭವಿರುತ್ತದೆ. ಅದರ ಮೇಲೆ ಪೂರ್ವ ಮುಖವಾಗಿ ಬ್ರಹ್ಮಯಕ್ಷ ಕುಳಿತಿದ್ದಾನೆ. ಎಲ್ಲರೂ ನೋಡಿದಿರಾ? ಇಲ್ಲಿನ ಬಸದಿಗಳ ಮೂರ್ತಿಗಳು ಕುಳಿತಿರುವ ರೀತಿಯನ್ನು ಗಮನಿಸಿದಿರಾ? ಜೈನ ಮೂರ್ತಿಗಳ ಈ ಭಂಗಿಯನ್ನು "ಪದ್ಮಾಸನ" ಅಂತ ಕರೆಯುತ್ತಾರೆ.

ಈಗ ಸರೋವರವನ್ನು ನೋಡಲು ಹೋಗೋಣ. ಇದು ಊರಿನ ಮಧ್ಯೆ. ಇರುವುದು ತಿಳಿಯುತ್ತದೆ. ಇದು ಹಿಂದೆ ಬಿಳಿಯ ಸರೋವರ ಆಗಿತ್ತು. ಈಗ ಅಷ್ಟು ಬಿಳುಪಿಲ್ಲ.

ಮುಂದೆ ಜೈನ ಮಠಕ್ಕೆ ಹೋಗೋಣ. ಅಲ್ಲಿ ನೋಡಿ. ಗೋಡೆಗಳ ಮೇಲೆ ಅನೇಕ ಚಿತ್ರಗಳಿವೆ. ಅವು, ಜೈನಯತಿಗಳ ಮತ್ತು ರಾಜರ ಸಾಧನೆಗಳನ್ನು ಹೇಳುತ್ತಿವೆ. ಇನ್ನು ಮುಂದಿನ ಆವರಣಕ್ಕೆ ಹೋಗೋಣ. ಇದು ಚಂದ್ರನಾಥನ ಬಸದಿ ಇದು ಪಾರ್ಶ್ವನಾಥ ತೀರ್ಥಂಕರರ ದೇವಾಲಯ.

ಈಗ ಈ ಊರಿನಲ್ಲೇ ಅತಿ ದೊಡ್ಡ ಬಸದಿಗೆ ಹೋಗೋಣ. ಇದನ್ನು "ಭಂಡಾರ ಬಸದಿ" ಅಂತ ಕರೆಯುತ್ತಾರೆ. ಈ ಕಟ್ಟಡದ ಶೈಲಿಯನ್ನು ಹೊಯ್ಸಳ ಶೈಲಿ ಎನ್ನುವರು. ಇದರ ಅಡಿಪಾಯವು ನಕ್ಷತ್ರಾಕಾರವಾಗಿರುತ್ತದೆ.

ಇನ್ನು ಮುಂದೆ ಅಕ್ಕಿನ ಬಸದಿಗೆ ಹೋಗೋಣ. ಇದರ ಮೇಲೆ ಗೋಪುರವಿದೆ. ಇದನ್ನು ಸಂಪೂರ್ಣವಾಗಿ ಹೊಯ್ಸಳ ಶೈಲಿಯಲ್ಲಿ ಕಟ್ಟಲಾಗಿದೆ. ಒಳಗೆ ನೋಡಿ, ಪಾರ್ಶ್ವನಾಥ ವಿಗ್ರಹ ಇದೆ. ಮೇಲೆ ಏಳು ಹೆಡೆ ಸರ್ಪದ ಪ್ರಭಾವಳಿ ಇದೆ. ಇದು ನಿಜಕ್ಕೂ ಸುಂದರ ಜಿನಾಲಯವಾಗಿದೆ. ಇದನ್ನು ಆಚಿಯಕ್ಕ ಎನ್ನುವವಳು ಕಟ್ಟಿಸಿದಳಂತೆ. ಆದ್ದರಿಂದ ಇದನ್ನು ಅಕ್ಕನ ಬಸದಿ ಎನ್ನುತ್ತಾರೆ.

ಮೊದಲು ಜೈನ ಮೂರ್ತಿಗಳನ್ನು ಬೆಟ್ಟಗುಡ್ಡಗಳಲ್ಲಿ ಗುಹೆಗಳಲ್ಲಿ, ಕೊರೆದು ಕೆತ್ತಿ ನಿರ್ಮಿಸಿದರು. ನಂತರ, ಸ್ವತಂತ್ರಕಲ್ಲಿನ ಕಟ್ಟಡಗಳು ಕಾಣಿಸಿಕೊಂಡವು. ಹೀಗೆಯೆ ಇಲ್ಲಿ ಚಾರುಕೀರ್ತಿಗಳ ಮಠವಿದೆ. ಗ್ರಂಥ ಭಂಡಾರ ಮತ್ತು ಪಾಠಶಾಲೆ ಇದೆ. ಇಷ್ಟು ಹೇಳುವ ವೇಳೆಗೆ ಸಾಯಂಕಾಲ ಆಯ್ತು. ನಾವು ಕಾಫಿ ಕುಡಿದು ವಿಶ್ರಾಂತಿ ಪಡೆದವು. ಊಟ ಆದಮೇಲೆ ಬಾಹುಬಲಿ ಕಥೆ ಹೇಳತೊಡಗಿದೆ.

ಬಾಹುಬಲಿ ವೃಷಭದೇವನ ಮಗ. ಅವನ ಅಣ್ಣ ಭರತ. ನಾವು ಬಾಹುಬಲಿಯ ಜೊತೆ ಅವನ ಅಣ್ಣ ಭರತನ ಕಥೆಯನ್ನು ತಿಳಿಯಬೇಕು. ಭರತ ಅಯೋಧ್ಯೆಯಲ್ಲಿ ರಾಜ್ಯವಾಳುತ್ತಿದ್ದ. ಅವನ ಆಯುಧಗಳನ್ನು ಇಡುವ ಕೋಣೆಯಲ್ಲಿ ಒಮ್ಮೆ ಚಕ್ರರತ್ನ ಹುಟ್ಟಿತು. ಅದನ್ನು ಭರತನು ಪೂಜೆ ಮಾಡಿದನು. ಅದೇ ಸಮಯದಲ್ಲಿ ಅವನಿಗೆ

ಒಬ್ಬ ಮಗ ಹುಟ್ಟಿದನು. ಇದರಿಂದ ಅವನಿಗೆ ತುಂಬಾ ಸಂತೋಷವಾಯಿತು. ಇಡೀ ರಾಜ್ಯದಲ್ಲಿ ಹಬ್ಬವನ್ನು ಆಚರಿಸಿದನು. ಬೀದಿಬೀದಿಗಳಲ್ಲಿ ಮುತ್ತುರತ್ನಗಳ ರಾಶಿ ಹಾಕಿಸಿದನು. ಬೇಡಿದವರಿಗೆ ಸಾಕು ಅನ್ನುವಷ್ಟು ದಾನ ಮಾಡಿದನು.. ಆಗ ದರಿದ್ರರೆಲ್ಲರೂ ಶ್ರೀಮಂತರಾದರು. ರಾಜ್ಯದಲ್ಲಿ ಬೇಡುವವರೇ ಇಲ್ಲದಂತಾಯಿತು. ಈತನ ಶತ್ರುಗಳಿಗೆ ಚಕ್ರರತ್ನದ ವಿಷಯ ಕೇಳಿ ಹೆದರಿಕೆಯಾಯ್ತು.

ಭರತನು ಅನೇಕ ದೇಶಗಳ ಮೇಲೆ ದಾಳಿ ಮಾಡಿದನು. ಅವನ ಸೈನ್ಯವು ಬಲಿಷ್ಠವಾಗಿತ್ತು. ಉತ್ತರದಿಂದ ದಕ್ಷಿಣಕ್ಕೆ ಇರುವ ರಾಜ್ಯವನ್ನು ಗೆದ್ದನು. ಮಗಧರಾಜ್ಯ ಅವನಿಗೆ ಸೇರಿತು. ಕುರುರಾಜರು, ಆವಂತಿರಾಜರು, ಪಾಂಚಾಲರು, ಕೋಸಲರು, ಕಾಶೀರಾಜ, ವಿದರ್ಭರು ಎಲ್ಲರೂ ಇವನಿಗೆ ಸೋತರು. ಕಾಳಿಂಗ, ಕಾಲಕೂಟ, ಕಿರಾತ ದೇಶಗಳೂ, ವಶವಾದವು. ದಕ್ಷಿಣದ ರಾಜ್ಯಗಳಾದ ಚೋಳ, ಪಾಂಡ್ಯ, ಕೇರಳ, ಇವು ಭರತನಿಗೆ ಸೇರಿದವು. ಹೀಗೆ ಅವನು ಭಾರತದ ಉದ್ದಕ್ಕೆ, ಅಗಲಕ್ಕೆ ಇರುವ ಅನೇಕ ರಾಜರನ್ನು ಗೆಲ್ಲುತ್ತ ವೃಷಭಾಚಲಕ್ಕೆ ಬಂದನು.

ವೃಷಭಾಚಲ ಒಂದು ದೊಡ್ಡ ಪರ್ವತ. ಅದು ತುಂಬಾ ಎತ್ತರವಾಗಿರುವುದಲ್ಲದೆ, ತುಂಬಾ ಅಗಲವಾದ ತಳವನ್ನೂ ಹೊಂದಿದೆ. ಈ ಪರ್ವತದ ಮೇಲೆ ತನ್ನನ್ನು ಹೊಗಳುವ ಮಾತುಗಳನ್ನು ಬರೆಯಬೇಕೆಂದು ಭರತನಿಗೆ ಆಸೆಯಾಯಿತು. ಜಾಗ ಹುಡುಕಿದ. ಆದರೆ ಅಲ್ಲಿ ಖಾಲಿ ಜಾಗ ಇರಲೇ ಇಲ್ಲ. ಸಾವಿರಾರು ರಾಜರುಗಳು ಅಲ್ಲಿ ಈಗಾಗಲೇ ತಮ್ಮ ಕಥೆ ಬರೆದಿದ್ದರು. ಆಗ ಭರತನಿಗೆ ಈ ಭೂಮಿಯನ್ನು ಎಷ್ಟೋ ರಾಜರು ಆಳಿದ್ದಾರೆ ಎಂದು ತಿಳಿಯಿತು. ಆತನ ಗರ್ವ ಕಡಿಮೆ ಆಯ್ತು. ಆದರೂ ಆತ ಒಬ್ಬ ರಾಜನ ಪ್ರಶಸ್ತಿಯನ್ನು ಅಳಿಸಿದ. ಆ ಜಾಗದಲ್ಲಿ ತನ್ನ ಪ್ರಶಸ್ತಿ ಬರೆದನು. ಹೀಗೆ ವೃಷಭಗಿರಿಯು ಅವನಿಗೆ ಒಂದು ಕಾಗದದ ಹಾಳೆ ಆಯ್ತು. ಅವನು ತಾನು ಗೆದ್ದು ಬಂದ ದೇಶಗಳ ವಿಜಯಗಳನ್ನು ಬರೆದನು. ಸೂರ್ಯ, ಚಂದ್ರರು, ಅದಕ್ಕೆ ಸಾಕ್ಷಿಯಾದರು. ಅಷ್ಟಲ್ಲದೆ ಅವನ ಧ್ವಜದಲ್ಲಿ ಚಂದ್ರನನ್ನೇ ಚಿಹ್ನೆಯನ್ನಾಗಿ ಮಾಡಿಕೊಂಡಿದ್ದನು.

ಭರತನು ನೂರಾರು ದೇಶಗಳನ್ನು ಗೆದ್ದು ಚಕ್ರವರ್ತಿಯಾದನು. ಕೊನೆಗೆ ತನ್ನ ರಾಜ್ಯವಾದ ಅಯೋಧ್ಯೆಗೆ ಹಿಂದಿರುಗಿದನು. ಇವನನ್ನು ಸ್ವಾಗತಿಸಲು ನಗರವನ್ನು

ಸಿಂಗರಿಸಿದ್ದರು. ಆದರೆ ಚಕ್ರವು ಅಯೋಧ್ಯೆಯ ಬಾಗಿಲಲ್ಲಿ ನಿಂತುಬಿಟ್ಟಿತು. ಇದರಿಂದ ಭರತ ಮತ್ತೆ ಯಾರ ಮೇಲೆ ಯುದ್ಧ ಸಾರುವನೋ ಎಂದು ಕೆಲವರು ತಿಳಿದರು. ಸೇನಾಧಿಪತಿ ಚಕ್ರ ನಿಂತ ವಿಷಯವನ್ನು ಭರತನಿಗೆ ತಿಳಿಸಿದನು. ಇದರ ಅರ್ಥವನ್ನು ತಿಳಿಯಲು ಭರತನು ಪುರೋಹಿತನನ್ನು ಕರೆಸಿದನು. ಪುರೋಹಿತನು ವಿಚಾರ ಮಾಡಿದನು. ಅವನ ಸಹೋದರರು ಅವನಿಗೆ ಸೋತಿಲ್ಲವೆಂದು ತಿಳಿಸಿದನು. ಅವನ ಸಹೋದರರು "ತಮ್ಮ ತಂದೆಯ ಹೊರತು ಯಾರಿಗೂ ತಲೆ ಬಾಗಿಸುವುದಿಲ್ಲ" ಎಂದು ಪ್ರಮಾಣ ಮಾಡಿದ್ದರು. ಈ ವಿಷಯವನ್ನು ಪುರೋಹಿತನು ಭರತನಿಗೆ ತಿಳಿಸಿದನು.

ಬಾಹುಬಲಿಗಿಂತಲೂ ಮೊದಲು ಈ ತಮ್ಮಂದಿರನ್ನು ಸರಿಪಡಿಸಿಕೊಳ್ಳಬೇಕೆಂದು ಭರತ ಯೋಚಿಸಿದನು. ಅವರ ಹತ್ತಿರ ತನ್ನ ದೂತರನ್ನು ಕಳಿಸಿದನು. ಆಗ ಭರತನ ತಮ್ಮಂದಿರು ಒಂದು ಕಡೆ ಸೇರಿದನು, ವಿಚಾರ ಮಾಡಿದರು. ನಂತರ ಒಂದು ತೀರ್ಮಾನ ಮಾಡಿಕೊಂಡು ಅದನ್ನು ಬರೆದು ಕಳಿಸಿದರು. "ಅಣ್ಣನನ್ನು ನಾವು ಗೌರವಿಸುತ್ತೇವೆ. ಆದರೆ ನಮ್ಮ ತಂದೆ ಇನ್ನೂ ಬದುಕಿದ್ದಾರೆ. ಅವರೇ ನಮಗೆ ರಾಜ್ಯ ಕೊಟ್ಟವರು. ಆದ್ದರಿಂದ ತಂದೆಗೆ ಮೊದಲು ಗೌರವ ಸಲ್ಲುವುದು, ನಿನಗಲ್ಲ". ನಂತರ ಅವನ ತಮ್ಮಂದಿರು ತಂದೆಯನ್ನು ಕಾಣಲು ಹೋದರು. ಈ ವಿಷಯ ತಿಳಿಸಿದರು. ಆಗ ಅವರಿಗೆ ಅವರ ತಂದೆ "ಜಿನಾಗಮ"ವನ್ನು ಬೋಧಿಸಿದರು. ಎಲ್ಲರೂ ತಪಸ್ಸನ್ನು ಕೈಗೊಂಡರು. ಇನ್ನು ಬಾಹುಬಲಿ ಒಬ್ಬನೇ ಉಳಿದನು.

ಆಮೇಲೆ ನಾನು ಬಾಹುಬಲಿಯ ಕಥೆ ಹೇಳತೊಡಗಿದೆ. ಬಾಹುಬಲಿ ಪೌದನ ಪುರದಲ್ಲಿ ರಾಜನಾಗಿದ್ದನು. ಅವನು ನೋಡಲು ಸುಂದರವಾಗಿದ್ದ. ಮತ್ತು ಬುದ್ಧಿಶಾಲಿ. ಆಡಳಿತ ವಿಧಾನಗಳನ್ನು ತಿಳಿದವನಾಗಿದ್ದನು. ವಿನಯಶೀಲನಾಗಿದ್ದನು. ಅವನ ತೋಳುಗಳಲ್ಲಿ ಅಸಾಮಾನ್ಯ ಬಲವಿತ್ತು. ಆದ್ದರಿಂದಲೇ ಅವನನ್ನು ಬಾಹುಬಲಿ ಎಂದು ಕರೆಯುತ್ತಿದ್ದರು. ಇಂತವನನ್ನು ಗೆಲ್ಲಲು ಭರತ ಉಪಾಯ ಮಾಡಬೇಕಾಯ್ತು. ಉಪಾಯದಲ್ಲಿ ನಿಪುಣನಾದ ದಕ್ಷಿಣಾಂಕನನ್ನು ಕರೆಸಿದನು. ತನ್ನ ಆಸೆಯನ್ನು ಹೇಳಿದನು. ಅದನ್ನು ಉಪಾಯವಾಗಿ ತಿಳಿಸಿ ಬರಲು ಬಾಹುಬಲಿಯ ಬಳಿಗೆ ಕಳಿಸಿದನು.

ದಕ್ಷಿಣಾಂಕನು ಅನೇಕ ದಿನಗಳು ಪ್ರಯಾಣ ಮಾಡಿ ಪೌದನಾಪುರಕ್ಕೆ ಬಂದನು. ಬಾಹುಬಲಿಯನ್ನು ನೋಡಿದನು. ಅವನ ತೇಜಸ್ಸು ದಕ್ಷಿಣಾಂಕನಲ್ಲಿ ಗೌರವ ಹುಟ್ಟಿತು. ಅವನು ಬಾಹುಬಲಿಗೆ ವಂದಿಸಿ, ಭರತನ ಆದೇಶವನ್ನು ತಿಳಿಸಿದನು. ಅದಕ್ಕೆ ಬಾಹುಬಲಿ ಈ ರಾಜ್ಯವನ್ನು ನನಗೆ ನನ್ನ ತಂದೆ ದಯಪಾಲಿಸಿದ್ದಾನೆ. ಸ್ವತಂತ್ರ ಪ್ರಿಯನಾದವನು ತನ್ನ ರಾಜ್ಯವನ್ನು ಬೇರೆಯವರಿಗೆ ಒಪ್ಪಿಸುವುದಿಲ್ಲ. ಆದ್ದರಿಂದ ಯುದ್ಧ ಭೂಮಿಯೇ ನಮ್ಮಿಬ್ಬರ ಶಕ್ತಿಯನ್ನು ತೀರ್ಮಾನಿಸಲಿ" ಇವನ ಅಭಿಮಾನದ ಮಾತುಗಳನ್ನು ಕೇಳಿದ ದೂತನು ಭರತನಿಗೆ ಬಾಹುಬಲಿಯ ನಿರ್ಧಾರವನ್ನು ತಿಳಿಸಿದನು. ಭರತನ ಮಂತ್ರಿ ಬಾಹುಬಲಿಯ ಮಂತ್ರಿ ಒಂದು ಕಡೆ ಸೇರಿ ಈ ಯುದ್ದದಿಂದ ಜನರಿಗೆ ಆಗುವ ನಷ್ಟವನ್ನು ತಪ್ಪಿಸಬೇಕೆಂದು ಬಯಸಿದರು. ಭರತ ಮತ್ತು ಬಾಹುಬಲಿಯರನ್ನು ಧರ್ಮಯುದ್ದಕ್ಕೆ ಒಪ್ಪಿಸಿದರು. ಅವರು ತಮ್ಮೊಳಗೆ ಮೂರು ಬಗೆಯ ಯುದ್ಧ ಮಾಡಿದರು. ದೃಷ್ಟಿಯುದ್ಧ, ಜಲಯುದ್ಧ ಮತ್ತು ಮಲ್ಲಯುದ್ಧಗಳು.

ಮೊದಲು ದೃಷ್ಟಿಯುದ್ಧ ಆರಂಭವಾಯ್ತು. ಎತ್ತರವಿದ್ದ ಬಾಹುಬಲಿ ಗಂಭೀರವಾಗಿ, ಶಾಂತನಾಗಿ ನಿಂತುಕೊಂಡು ರೆಪ್ಪೆ ಮಿಟುಕಿಸದೆ ನೋಡುತ್ತಲೇ ಇದ್ದ. ಭರತ ಕಣ್ಣು ಮುಚ್ಚಿದ. ಬಾಹುಬಲಿ ದೃಷ್ಟಿಯುದ್ದದಲ್ಲಿ ಜಯಶಾಲಿ ಆದ. ನಂತರ ಇಬ್ಬರೂ ಸರೋವರದೊಳಗೆ ಇಳಿದರು. ಜಲಯುದ್ಧ ಆರಂಭವಾಯಿತು. ಒಬ್ಬರಿಗೊಬ್ಬರು ನೀರು ಎರಚಲು ಮೊದಲು ಮಾಡಿದರು. ಬಾಹುಬಲಿ ಭರತನ ಇಡೀ ದೇಹ ನೆನೆಯುವಂತೆ ನೀರು ಎರಚಿದ. ಭರತ ತೋಯ್ದು ಹೋದ. ಆದರೆ ಭರತ ಎರಚಿದ ನೀರು ಬಾಹುಬಲಿಯ ಮುಖವನ್ನು ಮುಟ್ಟಲಿಲ್ಲ. ಹೀಗೆ ಭರತನು ಜಲಯುದ್ಧದಲ್ಲಿಯೂ ಸೋತನು. ನಂತರ ಮಲ್ಲಯುದ್ಧಕ್ಕೆ ಸಿದ್ಧರಾದರು. ಇಬ್ಬರೂ ಕುಣಿದು ಕುಪ್ಪಳಿಸಿದರು. ಒಬ್ಬರನ್ನೊಬ್ಬರು ಅದುಮಿ ಹಿಡಿದರು. ಭುಜಗಳನ್ನು ತಟ್ಟಿಕೊಂಡರು.

ಕೊನೆಯಲ್ಲಿ ಬಾಹುಬಲಿ ಭರತನನ್ನು ಎತ್ತಿ ಗರಗರ ತಿರುಗಿಸಿದನು. ಇನ್ನೇನು ಕೆಳಗೆ ಎತ್ತಿ ಹಾಕಬೇಕು ಅಂತ ಇದ್ದನು. ಆದರೆ ಅಣ್ಣನ ಬಗ್ಗೆ ಅವನಿಗಿದ್ದ ಪ್ರೀತಿ ತಡೆಯಿತು. ಅವನಿಗೆ ಅವಮಾನವಾಗಬಾರದು ಎಂದು ಯೋಚಿಸಿದನು. ಅದಕ್ಕಾಗಿ ಅಣ್ಣನನ್ನು



ಭರತ ಬಾಹುಬಲಿ ನಡುವೆ ಯುದ್ಧ

ಮೆಲ್ಲಮೆಲ್ಲಗೆ ಕೆಳಗೆ ಇಳಿಸಿದನು. ಹೀಗೆ ಎಲ್ಲಾ ಯುದ್ಧಗಳಲ್ಲಿ ಬಾಹುಬಲಿ ಗೆದ್ದನು. ಭರತನಿಗೆ ಅವಮಾನದಿಂದ ಸಿಟ್ಟು ಬಂತು. ಅದನ್ನು ತಡೆಯಲಾರದೆ ಬಾಹುಬಲಿಯ ಮೇಲೆ ಹೋಗಲು ಚಕ್ರವನ್ನು ಬಿಟ್ಟನು. ಚಕ್ರವು ಬಾಹುಬಲಿಗೆ ಪ್ರದಕ್ಷಿಣೆ ಹಾಕಿತು. ಅವನಿಗೆ ಏನೂ ಮಾಡದೆ ಸುಮ್ಮನೆ ನಿಂತುಕೊಂಡಿತು. ಆಗ ಅಲ್ಲಿದ್ದವರು ಚಕ್ರವರ್ತಿ ಭರತನಿಗೆ ಬುದ್ಧಿ ಮಾತುಗಳನ್ನು ಹೇಳಿದರು.

ಬಾಹುಬಲಿಯನ್ನು ಎಲ್ಲರೂ ಮೆಚ್ಚಿ ಹೊಗಳಿದರು. ಎಂದಾದರೊಮ್ಮೆ ನಾಶವಾಗುವ ರಾಜ್ಯಕ್ಕಾಗಿ ಅಣ್ಣ ಎಂತ ಕೆಟ್ಟ ಕೆಲಸ ಮಾಡಿದ ಅಂತ ಬಾಹುಬಲಿ ಯೋಚಿಸಿದ. ಅಣ್ಣನಿಗೆ ತನ್ನ ರಾಜ್ಯವನ್ನು ಬಿಟ್ಟು ಕೊಟ್ಟು, ತಾನು ತಪಸ್ಸಿಗೆ ಹೋಗುವೆನೆಂದು ಹೇಳಿದ. ತನ್ನ ಅಪರಾಧವನ್ನು ಕ್ಷಮಿಸುವಂತೆ ಕೇಳಿಕೊಂಡ. ಆಗ ಭರತನಿಗೆ ಪಶ್ಚಾತ್ತಾಪವಾಯ್ತು. ಭರತ ಬಾಹುಬಲಿಯನ್ನು ಹೋಗಬೇಡವೆಂದು ಬೇಡಿಕೊಂಡ. ಆದರೆ ಬಾಹುಬಲಿಯ ವೈರಾಗ್ಯ ಕದಡಲಿಲ್ಲ. ಅವನು ಆದಿನಾಥನ ಬಳಿಗೆ ಹೋದನು. ಅವನ ಬಳಿ ಜಿನದೀಕ್ಷೆಯನ್ನು ಪಡೆದನು.

ಆಸೆಯಿಂದ ಮನುಷ್ಯ ಎಂತ ಕೆಟ್ಟ ಕೆಲಸವನ್ನು ಮಾಡಬಲ್ಲ! ರಾಜ್ಯದ ಆಸೆಯಿಂದ ಭರತ ತನ್ನ ತಮ್ಮನನ್ನು ತಮ್ಮ ಎಂದು ಕಾಣಲಿಲ್ಲ. ತಮ್ಮನ ಮೇಲಿನ ಸಮಾನ ಭಾವನೆ ಹೊರಟುಹೋಯ್ತು. ಪ್ರೀತಿ, ಕರುಣೆ ಇಲ್ಲದಂತಾಯ್ತು. ರಾಜ್ಯವನ್ನು ಗೆಲ್ಲುವುದು ಮುಖ್ಯವಾಗಿತ್ತು. ಮಾನವ ಸಂಬಂಧಗಳಿಗೆ ಬೆಲೆ ಇಲ್ಲದಂತಾಯ್ತು. ಇಂತಹ ಜಗಳಗಳು ಆಸ್ತಿಗಾಗಿ ನಮ್ಮನಮ್ಮಲ್ಲಿ ನಡೆಯಬಹುದು. ಆಸ್ತಿ, ರಾಜ್ಯ ಎಲ್ಲವೂ ಕಾಲಕ್ಕೆ ಸಿಕ್ಕು ನಾಶವಾಗುತ್ತದೆ. ಮನುಷ್ಯ ಅವುಗಳಿಲ್ಲದೆ ಬದುಕಬಹುದು. ಆದರೆ ಪ್ರೀತಿಯ ಸಂಬಂಧಗಳಿಲ್ಲದೆ ಬದುಕಲಾರ.

ಬಾಹುಬಲಿ ಗೊಮ್ಮಟೇಶ್ವರ ಹೇಗೆ ಆದ? ಅಂತ ಮಾಧವ ಕೇಳಿದ. ಅವನ ಪ್ರಶ್ನೆಗೆ ಉತ್ತರ ಮುಂದುವರಿಸಿದೆ.

"ಜಿನದೀಕ್ಷೆ" ಪಡೆದ ಬಾಹುಬಲಿ ಶಾಸ್ತ್ರಗಳನ್ನು ಓದಿದ. ಒಂಟಿಯಾಗಿ ಅಲೆದ. ಅನೇಕ ಜಿನವ್ರತಗಳನ್ನು ಮಾಡಿದ. ಉಪವಾಸ ಮಾಡಿದನು. ಪ್ರತಿಮಾ ಯೋಗದಲ್ಲಿ ನಿಂತು ತಪಸ್ಸು ಮಾಡಿದನು. ಆಗ ಇವನ ಪಾದಗಳ ಬಳಿ ಹುತ್ತಗಳು ಬೆಳೆದವು. ಸರ್ಪಗಳು ಆಟ ಆಡಿದವು. ಮಾಧವಿ ಬಳ್ಳಿಗಳು ಇವನನ್ನು ತೋಳು ಸುತ್ತುವರಿದವು. ತಲೆಗೂದಲು ಗುಂಗುರು ಗುಂಗುರಾದವು. ಇವನಿಗೆ ಸುತ್ತಿದ್ದ ಬಳ್ಳಿಗಳನ್ನು ವಿದ್ಯಾಧರ ಸ್ತ್ರೀಯರು ಬಿಡಿಸಿದರು. ಈತನು ಒಂದು ವರ್ಷ ತಪಸ್ಸು ಮಾಡಿದರೂ "ಕೇವಲ ಜ್ಞಾನ" ಸಿಗಲಿಲ್ಲ. ತಾನು ಭರತನ ರಾಜ್ಯದಲ್ಲಿ ನಿಂತಿರುವೆ ಎಂಬ ಭಾವನೆ ಅವನಲ್ಲಿತ್ತು. ಆಗ ಭರತನು ಅಲ್ಲಿಗೆ ಬಂದನು. "ಈ ನೆಲ, ರಾಜ್ಯ ನೀನೇ ನನಗೆ ಕೊಟ್ಟಿದ್ದು" ಎಂದು ಹೇಳಿ ಸಮಾಧಾನಪಡಿಸಿದನು. ನಂತರ ತಮ್ಮನನ್ನು ಪೂಜಿಸಿದನು. ಅಣ್ಣನು ಪೂಜಿಸಿದ ಮೇಲೆ ಬಾಹುಬಲಿಗೆ "ಕೇವಲ ಜ್ಞಾನ" ಉಂಟಾಯಿತು. ಮತ್ತೆ ಭರತನು ಬಂದು ಬಾಹುಬಲಿಯನ್ನು ಭಕ್ತಿಯಿಂದ ಪೂಜಿಸಿದನು.

ಭರತನಿಗೆ ಬಾಹುಬಲಿಯ ಶಕ್ತಿ ತಿಳಿಯಿತು. ಅವನ ವೈರಾಗ್ಯ ಮತ್ತು ತ್ಯಾಗದ ಅರಿವು ಆಯ್ತು. ಅವನ ತಪಸ್ಸಿನ ಮಹಿಮೆ ಗೊತ್ತಾಯಿತು. ಅವನ ಹಿರಿಮೆಗಾಗಿ ಪೌದನಪುರದಲ್ಲಿ ಬಾಹುಬಲಿಯ ಮೂರ್ತಿಯನ್ನು ನಿಲ್ಲಿಸಿದನು. ವರ್ಷಗಳು ಕಳೆದಂತೆ ಆ ಜಾಗದಲ್ಲಿ ಸರ್ಪಗಳು ವಾಸಿಸಿದವು. ಜನರು ಅಲ್ಲಿಗೆ ಹೋಗುವುದನ್ನು ನಿಲ್ಲಿಸಿದರು. ಅಂತಹ ಮೂರ್ತಿಯನ್ನೇ ಚಾವುಂಡರಾಯ ಇಲ್ಲಿ ಕೆತ್ತಿಸಿರುವನು. ಹೀಗೆ ಬಾಹುಬಲಿ ಗೊಮ್ಮಟೇಶ್ವರನಾದನು. ಇಲ್ಲಿಗೆ ಯಾವಾಗಲೂ ಭಕ್ತರು, ಪ್ರವಾಸಿಗರು ಬರುತ್ತಾರೆ. ಬಾಹುಬಲಿಯನ್ನು ಪೂಜಿಸುತ್ತಾರೆ. ನಾವು ನಮ್ಮ ನಮಸ್ಕಾರ ಸಲ್ಲಿಸೋಣವೆ?

ಅಷ್ಟರಲ್ಲಿ ಮಹದೇವ ಪ್ರಶ್ನೆ ಮಾಡಿದ. "ಮೇಡಂ, ಗೊಮ್ಮಟೇಶ್ವರ ಹಾಗಾದರೆ ನಮ್ಮ ಹಾಗೆ ಮನುಷ್ಯ ಅಲ್ಲವೆ?" ಹೌದು, ಬಾಹುಬಲಿ ನಮ್ಮ ಹಾಗೆ ಮನುಷ್ಯನೆ. ತನ್ನಲ್ಲಿರುವ ಕಾಮ, ಕ್ರೋಧ, ಆಸೆ, ವಿಕಾರಗಳನ್ನು ದೂರ ಮಾಡಿದನು. ತಪಸ್ಸು ಮಾಡಿ, "ಕೇವಲಜ್ಞಾನ" ಪಡೆದನು. ತನ್ನ ಮಹತ್ ಸಾಧನೆಯಿಂದಾಗಿ ಪೂಜೆಗೆ ಅರ್ಹನಾಗಿದ್ದಾನೆ.

ಈ ದಿನಕ್ಕೆ ಇಷ್ಟೇ ಸಾಕು. ನಿದ್ದೆ ಮಾಡೋಣ. ನಾಳೆ ಬಸ್ಸಿನಲ್ಲಿ ಹಿಂದಿರುಗುವಾಗ ಗೊಮ್ಮಟೇಶ್ವರನ ವಿಗ್ರಹಗಳು ಬೇರೆ ಕಡೆ ಎಲ್ಲಿ ಇವೆ ಅಂತ ಹೇಳ್ತೀನಿ.

ಮಾರನೆಯ ದಿನ ನಾವು ಊರಿಗೆ ಹಿಂದಿರುಗಲು ಬಸ್ಸು ಹತ್ತಿದೆವು. ಎಲ್ಲರ ಮುಖಗಳಲ್ಲೂ ಸಾಹಸ ಮಾಡಿ ಬಂದವರ ಕಳೆ ಇತ್ತು. ನನ್ನ ಇಬ್ಬರು ಶಿಷ್ಯರು ಮೆಲ್ಲಗೆ ಹತ್ತಿರ ಬಂದರು. ಅವರಿವರನ್ನು ಕೇಳಿಕೊಂಡು ನನ್ನ ಎಡಕ್ಕೊಬ್ಬ, ಬಲಕ್ಕೊಬ್ಬ ಕೂತೇ ಬಿಟ್ಟರು. ನಾನು ಸುಮ್ಮನೆ ಇದ್ದೆ. ಮೇಡಂ, ಕರ್ನಾಟಕದಲ್ಲಿ ಇದೇ ರೀತಿಯ ವಿಗ್ರಹಗಳು ಎಲ್ಲೆಲ್ಲಿ ಇವೆ? ಅಂತ ಪ್ರಶ್ನೆ ಶುರು ಮಾಡಿದರು.

ನಾನು ಮುಂದುವರಿಸಿದೆ. ನಮ್ಮ ರಾಜ್ಯದಲ್ಲಿ ಒಟ್ಟು ಎಂಟು ಗೊಮ್ಮಟ ಮೂರ್ತಿಗಳು ಇವೆ. ಶ್ರವಣಬೆಳಗೊಳದ ಮೂರ್ತಿಯೇ ಅತ್ಯಂತ ಹಳೆಯದು. ಧರ್ಮಸ್ಥಳದಲ್ಲಿ ಇರುವ ವಿಗ್ರಹ ಇತ್ತೀಚಿನದು. ಶ್ರವಣ ಬೆಳಗೊಳದ ಗೊಮ್ಮಟನಿಗಿಂತ ಹಳೆಯ ವಿಗ್ರಹಗಳು ಐಹೊಳೆ ಮತ್ತು ಬಾದಾಮಿಯದಲ್ಲಿವೆ. ಇವುಗಳಿಗೂ, ಶ್ರವಣ ಬೆಳಗೊಳದ ಮೂರ್ತಿಗೂ ಒಂದು ವ್ಯತ್ಯಾಸವಿದೆ. ಈ ಎರಡು ಮೂರ್ತಿಗಳು ದೇವಾಲಯಗಳಲ್ಲಿ ಇವೆ. ಆದರೆ ಶ್ರವಣಬೆಳಗೊಳದ ಮೂರ್ತಿ ಬೆಟ್ಟದ ಬಯಲಲ್ಲಿ ಇದೆ. ಕಾರ್ಕಳದ ಗೊಮ್ಮಟನಿಗೆ ಕಲೆಯ ದೃಷ್ಟಿಯಿಂದ ಮೂರನೆಯ ಜಾಗ ಇದೆ. ಇದನ್ನು ಸಾಂತರ ವಂಶಜ ವೀರಪಾಂಡ್ಯನು ಸ್ಥಾಪಿಸಿದನು. ಇದೇರೀತಿ ವೇಣೂರಿನಲ್ಲಿ ಬಾಹುಬಲಿ ಮೂರ್ತಿ ಇದೆ. ಮೈಸೂರಿನಿಂದ ಇಪ್ಪತ್ತೈದು ಕಿಲೋಮೀಟರ್ ದೂರದಲ್ಲಿ ಗೊಮ್ಮಟಗಿರಿಯಲ್ಲಿ ಬಾಹುಬಲಿ ವಿಗ್ರಹವಿದೆ. ಇದನ್ನು ಯಾರು ಕೆತ್ತಿಸಿದರು ಎಂದು ತಿಳಿದಿಲ್ಲ. ಇದರ ಕಾಲುಗಳ ಬಳಿ ಹುತ್ತಗಳು ಇಲ್ಲ. ಬರೀ ಹಾವುಗಳಿವೆ. ಈ ಶಿಲ್ಪಕ್ಕೆ ಕಪ್ಪು ಬಣ್ಣ ಬಳಿದಿದ್ದಾರೆ.

ಗದಗ ತಾಲ್ಲೂಕಿನ ಕಳಸಾಪುರದಲ್ಲಿ ಬಾಹುಬಲಿ ಮೂರ್ತಿ ಇದೆ. ಇದರ ವಿಶೇಷವೆಂದರೆ, ಹುತ್ತಗಳಿಲ್ಲ, ನಾಗರಹಾವುಗಳಿಲ್ಲ, ಬ್ರಾಹ್ಮೀ ಸುಂದರಿಯರಿಲ್ಲ. ಧರ್ಮಸ್ಥಳದ ಬಾಹುಬಲಿಯನ್ನು ೧೯೭೩ರಲ್ಲಿ ಸ್ಥಾಪಿಸಲಾಯಿತು. ಇದನ್ನು ಒಂದು

ಎತ್ತರದ ದಿಬ್ಬದ ಮೇಲೆ ಇಡಲಾಗಿದೆ. ಇದರ ಶಿಲ್ಪಕಾರ ರಂಜಾಳ ಗೋಪಾಲ ಶೆಣೈ ಅವರು. ಆದರೆ ಈ ಯಾವ ಮೂರ್ತಿಗಳು ಶ್ರವಣಬೆಳಗೊಳದ ಮೂರ್ತಿಯಷ್ಟು ಆಕರ್ಷಕವಾಗಿಲ್ಲ. ಸಂತೋಷದ ಅನುಭವ ನೀಡುವುದಿಲ್ಲ. ಕಣ್ಣು ತುಂಬಿ, ಮನ ತುಂಬಿ ಹೃದಯದಲ್ಲಿ ಪೂಜ್ಯ ಅನುಭವ ನೀಡುವುದೆಂದರೆ, ಶ್ರವಣಬೆಳಗೊಳದ ಗೊಮ್ಮಟೇಶ್ವರನೊಬ್ಬನೆ.

ಇವನನ್ನು ಕನ್ನಡದ ಕವಿಗಳು ಹಾಡಿ ಹೊಗಳಿದ್ದಾರೆ. ಮೂರ್ತಿಯನ್ನು ಕಂಡಾಗ ನಮ್ಮ ಶಕ್ತಿಗೆ ತಕ್ಕ ಅನುಭವ ನಮಗೆ ಸಿಕ್ಕಿದೆ. ಆದರೆ ಕವಿಗಳು ಕಂಡ ಗೊಮ್ಮಟನನ್ನು ಓದಿ ತಿಳಿಯೋಣ.

ಈಗ ನನ್ನ ಮುಂದೆ ಇಬ್ಬರು ಕವಿಗಳ ಕವಿತೆಗಳಿವೆ. ಒಂದು ಹಳೆ ಕನ್ನಡದಲ್ಲಿ ಬರೆದ ಬೊಪ್ಪಣ ಪಂಡಿತನ ಕವಿತೆ. ಇನ್ನೊಂದು ನಮ್ಮ ಕಾಲದ ರಾಷ್ಟ್ರ ಕವಿ ಕೆ.ವಿ. ಪುಟ್ಟಪ್ಪನವರ ಕವಿತೆ. ಯಾವುದನ್ನು ಓದೋಣ ಅರ್ಚನಾ? ಎರಡೂ ಓದೋಣ ಮೇಡಂ. ಅಂದರೂ ಭಾವಾರ್ಥ ಮಾತ್ರ ನಮಗೆ ಸಾಕು ಅಂತ ಅರ್ಚನಾಳ ಬೇಡಿಕೆ. ಈಗ ಶ್ರವಣ ಬೆಳಗೊಳದ ಗೊಮ್ಮಟೇಶ್ವರನ ಸಾನಿಧ್ಯ ಪದ್ಯ.

ಇಲ್ಲಿಗೆ ಬಂದರೆ, ಯಾರೋ ಬಾಯಿ ಮುಚ್ಚಿ ಹಿಡಿದ ಹಾಗೆ ಆಗುತ್ತದೆ. ಮೌನದ ಭಾರದಿಂದ ಮಾತು ಮೂರ್ಛೆ ಹೋಗುತ್ತದೆ. ಮನಸ್ಸಿನಲ್ಲಿ ಗಾಂಭೀರ್ಯ ಮತ್ತು ಗೌರವದ ಪ್ರವಾಹವೇ ಹರಿಯುತ್ತದೆ. ವಿಸ್ತಾರವಾದ ಕಡಲನ್ನು ಒಂಟಿಯಾಗಿ ನೋಡಿದರೆ ಅಥವಾ ಅಮಾವಾಸ್ಯೆಯ ಕತ್ತಲಲ್ಲಿ ಹೊಳೆಯುವ ಕೋಟಿ ಕೋಟಿ ನಕ್ಷತ್ರಗಳನ್ನು ನೋಡಿದರೆ ಮನಸ್ಸಿನಲ್ಲಿ ಎಂಥ ಭಾವನೆ ಮೂಡುತ್ತದೆಯೋ ಅಂತಹುದೇ ಭಾವನೆ ಮೂಡುತ್ತದೆ. ನಮ್ಮ ಅಹಂಕಾರ ತಗ್ಗುತ್ತದೆ.

ಜೀವವಿಲ್ಲದ ಕಲ್ಲಿನಲ್ಲಿ ನಗೆ ಹುಟ್ಟಿಸಬಹುದಾದ ನಗ್ನತೆಯನ್ನು ಭವ್ಯತೆಯ ಭಾವನೆ ಬರುವಂತೆ ಈ ರೂಪ ತಂದಿದೆ. ಈ ವಿಗ್ರಹವನ್ನು ನೋಡುತ್ತಾ ಹೋದಂತೆ ಹೀನತೆ, ನೀಚತನಗಳು ಮನಸ್ಸಿಗೆ ಬರುವುದಿಲ್ಲ. ಶಿಶುವಿನ ಮುಗ್ಧತೆ ಸಂತನ ಆನಂದ

ಮತ್ತು ಸತ್ಯದ ರಹಸ್ಯ ತಿಳಿದ ನಗು ಎಲ್ಲವನ್ನು ಕಂಡು ನಮ್ಮ ನುಡಿಗೆ ಮೌನದ ಸಿಡಿಲು ಹೊಡೆಯುತ್ತದೆ.

ಗೊಮ್ಮಟನು ನಗ್ನತೆಗೆ ನಾಚಿಲ್ಲ. ನಾಗರಿಕ ದೇಶವು ನಮ್ಮ ಅಲ್ಪತೆಯನ್ನು ಮುಚ್ಚುತ್ತದೆ. ಅಲ್ಪತೆಯೇ ಇಲ್ಲದ ಮಹನೀಯನಿಗೆ ಮೋಸದ ಬಟ್ಟೆ ಯಾಕೆ ಬೇಕು? ಕೇಡು, ನೀಚತನ, ಹೀನ ಬುದ್ಧಿಗಳಿಗೆ ಗುಟ್ಟಿನ ಹೊದಿಕೆ ಬೇಕು. ವಿಸ್ತಾರವಾದ ಗಗನಕ್ಕೆ ಗುಟ್ಟು ಇಲ್ಲ. ಗೊಮ್ಮಟ ಗಗನದಂತೆ, ಅಲ್ಪಮನುಷ್ಯನಿಗೆ ವೇಷವಿಲ್ಲದೆ ಗೌರವವಿಲ್ಲ. ಕಾವಿ ತೊಟ್ಟು ಗುರುಗಳಾದವರು, ಹಣವಿದ್ದು ದೊರೆಗಳಾದವರು, ವೇಷ ತೊಟ್ಟು ವೀರರಾದವರು, ಜನಿವಾರದಿಂದ ಬ್ರಾಹ್ಮಣರಾದವರು. ಹೀಗೆ ಮೆರೆಯುವ ಎಲ್ಲರೂ ಇಲ್ಲಿಗೆ ಬಂದು ಸತ್ಯದ ದಿಗಂಬರತೆಯ ಭವ್ಯತೆಯನ್ನು ಕಲಿಯಬೇಕು.

ಇದೇರೀತಿ ಬೊಪ್ಪಣ ಪಂಡಿತನು ಬಾಹುಬಲಿಯನ್ನು ಹೊಗಳಿ ಬರೆದಿದ್ದಾನೆ. ಈ ಪ್ರಪಂಚದ, ಎಲ್ಲ ರೀತಿಯ ಕಷ್ಟಕಾರ್ಪಣ್ಯಗಳನ್ನು ತಡೆದುಕೊಳ್ಳಲು ಶಕ್ತಿ ಕೊಡು ದೇವ ಎಂದು ಬೇಡಿದ್ದಾನೆ.

***



ಈ ದಿನ ಡಿಸೆಂಬರ್ ಹತ್ತೊಂಬತ್ತನೇ ತಾರೀಖು, ಇಸವಿ ಸಾವಿರದ ಒಂಬೈನೂರ ತೊಂಬತ್ತಮೂರು ಶ್ರವಣಬೆಳಗೊಳದಲ್ಲಿ ಮಹಾಮಸ್ತಕಾಭಿಷೇಕ. ಎಲ್ಲರೂ ಸೇರಿ ಟಿ.ವಿ.ಯಲ್ಲಿ ನೋಡೋಣ ಬನ್ನಿ ಒಳಗೆ. ಎಲ್ಲರೂ ಆರಾಮವಾಗಿ ಕುಳಿತುಕೊಳ್ಳಿ.

ನಿಧಾನವಾಗಿ ಕೇಳಿಸಿಕೊಳ್ಳಿ, ಗೊಮ್ಮಟೇಶ್ವರನ ಪೂಜೆಯ ಪದ್ಯ ಹೇಳುತ್ತಿದ್ದಾರೆ. ಅಲ್ಲಿ ನೋಡಿ ಜೈನಯತಿಗಳು ಕುಳಿತು ಧ್ಯಾನ ಮಾಡುತ್ತಿದ್ದಾರೆ. ಸಾವಿರಾರು ಭಕ್ತರು ಮಹಾಮಸ್ತಕಾಭಿಷೇಕ ನೋಡಲು ಕುಳಿತಿದ್ದಾರೆ. ಒಂದು ಕಡೆ ಗಂಡಸರು ಕುಳಿತಿದ್ದಾರೆ. ಇನ್ನೊಂದು ಕಡೆ ಹೆಂಗಸರು ಕುಳಿತಿದ್ದಾರೆ. ಮಕ್ಕಳು ಮತ್ತು ಮುದುಕರೂ ಕುಳಿತಿದ್ದಾರೆ. ಜೈನರಲ್ಲಿ ತೀರ್ಥಂಕರರಾಗಲು ಮಹಿಳೆಯರಿಗೂ ಅವಕಾಶವಿದೆ. ಹಿಂದೆ, ಶ್ವೇತಾಂಬರರ

ಪ್ರಕಾರ 'ಮಲ್ಲಿ' ಎಂಬಾಕೆ ತೀರ್ಥಂಕರಳು. ಆರ್ಮಿಕೆ, ಅಜ್ಜಿಕೆ, ಅಜ್ಜಿ, ಕಂತಿ ಇವು ಜೈನ ಸನ್ಯಾಸಿನಿಯರ ಹೆಸರುಗಳು.

ಅಲ್ಲಿ ಮಧ್ಯದಲ್ಲಿ ನೋಡಿ. ಸಾವಿರದ ಒಂದು ಕೊಡಗಳು ಇವೆ. ಅವುಗಳ ಮೇಲೆ ತೆಂಗಿನಕಾಯಿ ಇಟ್ಟಿದ್ದಾರೆ. ಅವುಗಳನ್ನು ಸ್ವಸ್ತಿಕ ಆಕಾರದಲ್ಲಿ ಜೋಡಿಸಿದ್ದಾರೆ. ಅವುಗಳನ್ನು ನೋಡಿಕೊಳ್ಳಲು ಪೂಜಾರಿಗಳು ಇದ್ದಾರೆ. ಆ ಕಡೆ ನೋಡಿ ಕುಂಕುಮದ ನೀರಿನ ಕೊಡಗಳು ಇವೆ. ಅವುಗಳ ಪಕ್ಕದಲ್ಲಿ ಅರಿಸಿನ ನೀರಿನ ಕೊಡಗಳಿವೆ. ಅವುಗಳ ಮಧ್ಯೆ ಲವಂಗ, ಗಂಧ, ಕರ್ಪೂರ ಇನ್ನು ಮುಂತಾದ ಎಂಟು ಪರಿಮಳ ದ್ರವ್ಯಗಳಿಂದ ತುಂಬಿದ ಕೊಡಗಳಿವೆ. ಹಾಲು ಇದೆ. ಎಳೆನೀರು ಇದೆ. ಬಾಳೆಹಣ್ಣು ಇದೆ, ಬೆಲ್ಲ, ಸಕ್ಕರೆ, ತುಪ್ಪ ಇದೆ. ಬಾದಾಮಿ, ಖರ್ಜೂರ, ಗಸಗಸೆ, ಮೊಸರು, ಬಂಗಾರ ಇವೆ. ಬೆಳ್ಳಿಯ ಹೂಗಳು ಮತ್ತು ನಾಣ್ಯಗಳಿವೆ. ಅಗೋ ಅಲ್ಲಿ ನೋಡಿ. ಅನೇಕ ಜಾತಿಯ ಹೂವುಗಳ ಬಟ್ಟಲುಗಳಿವೆ. ಇವುಗಳನ್ನೆಲ್ಲಾ ಒಂದೊಂದಾಗಿ ಸುರಿಯುತ್ತಾರೆ.

ವಿಗ್ರಹದ ಹಿಂದೆ ಎಪ್ಪತ್ತು ಅಡಿ ಎತ್ತರದ ಅಟ್ಟಣಿಗೆಯನ್ನು ಕಟ್ಟಿದ್ದಾರೆ. ಒಂದೇ ಬಾರಿಗೆ ಅಲ್ಲಿ ಮೂವತ್ತು ಜನ ಅರ್ಚಕರು ಮತ್ತು ಭಕ್ತರು ಅದನ್ನು ಹತ್ತಬಹುದು. ಹಾಗೆ ಗೊಮ್ಮಟೇಶ್ವರನ ನೆತ್ತಿಯ ಭಾಗ ತಲುಪುತ್ತಾರೆ.

ಈಗ ಮಹಾಮಸ್ತಕಾಭಿಷೇಕ ಶುರು ಆಗುತ್ತದೆ. ನಿಮ್ಮ ಕಣ್ಣುಗಳು ಅದನ್ನು ನೋಡಲಿ. ಮುಹೂರ್ತ ಹತ್ತಿರವಾಯ್ತು. ಧರ್ಮ ಗ್ರಂಥಗಳನ್ನು ಓದುತ್ತಿದ್ದಾರೆ. ಮಂತ್ರಗಳನ್ನು ಜೋರಾಗಿ ಹೇಳುತ್ತಿದ್ದಾರೆ. ಈಗ ಬೇರೆ ಬೇರೆ ನದಿ, ಜಲಾಶಯಗಳಿಂದ ತಂದ ನೀರನ್ನು ಸುರಿಯುತ್ತಾರೆ. ನೋಡಿ ನೋಡಿ ಮೊದಲು ಪವಿತ್ರ ಜಲವನ್ನು ಸುರಿಯುತ್ತಿರುವರು. ಬಾಳೆ ಹಣ್ಣು, ಬೆಲ್ಲ ಸುರಿದರು. ತುಪ್ಪ, ಸಕ್ಕರೆ ಸುರಿದರು. ಬಾದಾಮಿ, ಖರ್ಜೂರ ಸುರಿದರು. ಗಸಗಸೆ, ಹಾಲು ಸುರಿದರು. ಮೊಸರು ಸುರಿದರು, ಗಂಧ ಸುರಿದರು, ಬಂಗಾರ, ಬೆಳ್ಳಿಯ ಹೂವುಗಳನ್ನು ಸುರಿದರು. ಬೆಳ್ಳಿಯ ನಾಣ್ಯಗಳನ್ನು ಸುರಿದರು. ಈಗ ಭಕ್ತರು ಅಭಿಷೇಕ ಮಾಡುವರು. ಪೂಜಾರಿಗಳು ಅವರಿಗೆ ಸಹಾಯ ಮಾಡುತ್ತಿರುವರು. ಹೂಗಳ ಸುರಿಮಳೆ ಆಗುತ್ತಿದೆ. ಇದನ್ನು ನೋಡಲು ನಮ್ಮ ಎರಡೂ

ಕಣ್ಣುಗಳು ಸಾಲವು. ಕಣ್ಣಿಗೆ ಹಬ್ಬವಾಗಿದೆ. ಈ ಸುಂದರ ದೃಶ್ಯವನ್ನು ಬೇರೆಯವರಿಗೆ ಹೇಗೆ ಹೇಳುವುದು? ಸಾಧ್ಯವೇ ಇಲ್ಲ. ಮಾತುಗಳಿಗೆ ಕೆಲಸವಿಲ್ಲ. ಮೌನ ಗೆದ್ದಿದೆ.

ಇನ್ನೂ ಒಂದು ತಿಂಗಳು ಪೂರ್ತಿ ಬೇರೆ ಬೇರೆ ಪೂಜೆಗಳು ನಡೆಯುತ್ತವೆ. ಇದನ್ನು ನೋಡಲು ಲಕ್ಷ, ಲಕ್ಷಜನ ಬರುತ್ತಾರೆ. ಇಡೀ ಊರು ಅಲಂಕಾರ ಮಾಡಿಕೊಂಡಿದೆ. ಜನ ಸಂಭ್ರಮದಿಂದ ಇದ್ದಾರೆ. ಧಾರ್ಮಿಕ ಕಾರ್ಯಕ್ರಮಗಳು ಜೈನಮಠದಲ್ಲಿ ನಡೆಯುತ್ತವೆ. ಎಲ್ಲಾ ಕಡೆ ಹಬ್ಬ. ಇದನ್ನು ನೋಡಿದ ನಮಗೂ ಹಬ್ಬ.

ಏನು ಎಲ್ಲರೂ ಗರಬಡಿದವರಂತೆ ಸುಮ್ಮನೆ ಕುಳಿತಿರುವಿರಿ? “ಇನ್ನೇನು ಮೇಡಂ, ಹೇಳಲು ಏನೂ ಇಲ್ಲ. ಎಷ್ಟು ಚೆಂದ!” ಅಂತ ಮಹದೇವ ಹೇಳಿದ.

ಹೌದು “ಎಷ್ಟು ಚೆಂದ!”

***

---

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

---